# ಮುನ್ನುಡಿ

ಇಂಗ್ಲಿಷಿನಲ್ಲಿ ಮ್ಯಾಥ್ಯೂ ಆರ್ನಾಲ್ಡ್ ಅವರ ಸೊಹ್ರಾಬ್ ಅನ್ಡ್ ರುಸ್ತುಂ ಎಂಬ ಕವನವನ್ನು ಓದಿದಂದಿನಿಂದ ನನಗೆ ಅದರಲ್ಲಿ ಪ್ರೀತಿ ಹುಟ್ಟಿತು. ಆ ಕಥೆಯನ್ನು ನಾಟಕ ರೂಪದಲ್ಲಿ ಕನ್ನಡಿಗರಿಗೆ ಅರ್ಪಿಸಬೇಕೆಂಬ ಕುತೂಹಲವು ಈಗ್ಗೆ ಎರಡು ವರುಷಗಳ ಕೆಳಗೆ ಉಂಟಾಯಿತು. ಆದರೂ ಹೋದ ವರ್ಷ ಜೂನ್ ತಿಂಗಳವರೆಗೂ ಏನೂ ಕೆಲಸವಾಗಲಿಲ್ಲ. ಇಂಗ್ಲಿಷ್ ಕವನದಲ್ಲಿರುವ ಕಥಾಭಾಗಕ್ಕೆ ಅದರಲ್ಲಿ ಅಲ್ಲಲ್ಲಿ ಸೂಚಿತವಾಗಿರುವ ಹಿಂದಿನ ವೃತ್ತಾಂತವನ್ನೂ ಸೇರಿಸಿ, ಕೊನೆಗೆ ಸೊಹ್ರಾಬನ ತಾಯಿಯನ್ನೂ ಯುದ್ಧರಂಗಕ್ಕೆ ಕರೆತರಬೇಕೆನ್ನಿಸಿತು. ತಮ್ಮ ಪ್ರೀತಿ ಅಜ್ಞಾನಗಳ ಫಲವಾಗಿ ವಿಧಿನಿಯಮದಂತೆ ಮಗನನ್ನು ಕೊಂದ—ಅಹುದು, ಕೊಂದ—ತಾಯಿತಂದೆಯರು ಕೈಮೀರಿ ಹೋದಮೇಲೆ ಮೃತನಾದ ಮಗನ ಇರ್ಕಡೆಗಳಲ್ಲಿಯೂ ನಿಂತು ನೋಡುತ್ತಿರುವಂತೆ ಚಿತ್ರವೊಂದು ಕಣ್ಣೆದುರಿಗೆ ನಿಂತು ಒಂದು ದಿನ ಕಾಣಿಸಲು ಆ ದಿನವೇ ಕೆಲಸಕ್ಕೆ ಆರಂಭಮಾಡಿ ಕೆಲದಿನಗಳಲ್ಲಿಯೇ ಇದನ್ನು ಮುಗಿಸಿದೆನು. ಹೀಗೆ ಯಾವ ಮೂಲದಲ್ಲಿಯೂ ಇಲ್ಲದಿದ್ದರೂ ತಾಯಿ ತಹಮಿನೆಯನ್ನು ಸೊಹ್ರಾಬನ ಮರಣಕಾಲದ ಸಮಯಕ್ಕೆ ರಂಗಕ್ಕೆ ಕರೆತಂದಿದ್ದೇನೆ. ಆದರ ಔಚಿತ್ಯ ಸರಿತಪ್ಪುಗಳ ವಿಚಾರವನ್ನು ನಾನು ಮಾಡುವಹಾಗಿಲ್ಲ. ಸುಲೇಮಾನನು ಕೇವಲ ಕಾಲ್ಪನಿಕ ವ್ಯಕ್ತಿ; ಇವನಿಂದ ಕಥೆಯ ಬೆಳವಣಿಗೆಗೂ, ಒಂದು ಬಗೆಯಾಗಿ ರಸಕ್ಕೂ ಪೋಷಣೆಯಾಗಬಹುದೆಂದು ಈ ಪಾತ್ರವನ್ನು ರಚಿಸಿದೆ. ಮೂರು ತಿಂಗಳ ಅವಧಿಯೊಳಗಾಗಿ ತಂದೆಯನ್ನು ಕರೆತರುತ್ತೇನೆಂದು ಸೊಹ್ರಾಬನು ತಾಯಿಗೆ ಮಾಡಿದ ವಾಗ್ದಾನವು ಕಥೆಗೆ ಒಂದು ಕಾಲದ ಕಟ್ಟಿನಂತಿರುವುದು. ಮೊದಲಿನಿಂದ ಕೊನೆಯವರೆಗೂ ತಾಯಿ ತಂದೆ ಮಗ ಈ ಮೂವರ ವ್ಯಾಪಾರಗಳಮೇಲೂ, ವಿಧಿಯು ಗಿಡುಗನಂತೆ ಹಾರಾಡಿ ಅವರ ಕಾರ್ಯಗಳನ್ನು ನಿರ್ಧರಿಸುತ್ತಿದ್ದಿತೆಂಬುದೂ ಇಲ್ಲಿ ಸ್ವಲ್ಪ ಮಟ್ಟಿಗೆ ಹೊರಪಡಬಹುದು.

ಫರ್‌ದೂಸಿಯ ಷಾಹನಾಮಾ ಎಂಬ ಮಹಾಕಾವ್ಯದಲ್ಲಿ ಸೊಹ್ರಾಬ್-ರುಸ್ತುಮರ ಕಥೆಯು ಒಂದು ಉಪಾಖ್ಯಾನ ರೂಪದಲ್ಲಿದೆ. ಅದೇ ಆರ್ನಾಲ್ಡರ ಕವಿತೆಗೂ ಈ ರೂಪಕಕ್ಕೂ ಮೂಲ.

ಸರಳ ಪದ್ಯಗಳಲ್ಲಿಯೂ, ಗದ್ಯಪದ್ಯ ಸಮ್ಮಿಶ್ರವಾದ ಸಾಂಪ್ರದಾಯಿಕ ರೀತಿಯಲ್ಲಿಯೂ ಇದನ್ನು ಬರೆಯದೆ, ನಮ್ಮ ನಾಡಿನ ದಿನಚರಿಯ ಬಳಕೆಯ ಭಾಷೆಯಲ್ಲಿಯೇ ಇದನ್ನು ಬರೆಯುವ ಯತ್ನಮಾಡಿದ್ದೇನೆ. ಕೃತಕತೆಗೆ ಸ್ವಲ್ಪವೂ ಅವಕಾಶ ಕೊಡದೆ ಸಂಪೂರ್ಣವಾಗಿ ರೂಢಿಯ ಮಾತುಗಳಲ್ಲಿಯೇ ಬರೆಯುವುದು ಆಗಿಲ್ಲವಾದರೂ ಬಹುಮಟ್ಟಿಗೆ ಹಾಗೆ ಮಾಡಲು ಪ್ರಯತ್ನ ನಡೆದಿದೆ. ಕೇವಲ ಈ ಬಳಕೆಯ ಭಾಷೆಯಲ್ಲಿಯೇ ಭಾವದ ಓಟ, ಮನಸ್ಸಿನ ಉದ್ವೇಗ, ಕಾರ್ಯಗಳ ತೀವ್ರತೆ ಮುಂತಾದುವನ್ನು ತರಲು ಸಾಧ್ಯವೇ ಎಂಬ ಪ್ರಶ್ನೆಯು ಈ ಪರೀಕ್ಷಾ ಪ್ರಯತ್ನಕ್ಕೆ ಪ್ರೇರಕವಾಯಿತು. ಆರ್ನಾಲ್ಡರ ಕವಿತೆಯ ಮೇಲಿನ ಪ್ರೀತಿಯು ಎಷ್ಟೋ ಈ ಚಪಲದ ಬಾಧೆಯೂ ಅಷ್ಟೇಮಟ್ಟಿಗೆ ಈ ರೂಪಕದ ರಚನೆಯಲ್ಲಿ ಕಾರ್ಯಮಾಡಿದೆ.

ಇದನ್ನು ಬರೆಯುತ್ತಿರುವಾಗಲೂ ಬರೆದಮೇಲೂ ನನಗೆ ಪ್ರೋತ್ಸಾಹವನ್ನು ಕೊಟ್ಟು ನಾನು ಓದಿದುದನ್ನು ಪ್ರೀತಿಯಿಂದ, ಸಹನೆಯಿಂದ ಕೇಳಿದ—ಅದು ಬಹು ದೊಡ್ಡ ಉಪಕಾರ—ಎಲ್ಲ ಮಿತ್ರರಿಗೂ; ಅಚ್ಚಾಗುವ ಸಮಯದಲ್ಲಿಯೂ ಇದನ್ನು ನೋಡಿ ತಿದ್ದಿ ಸಹಾಯಮಾಡಿರುವ ಇನ್ನೊಬ್ಬ ಪೂಜ್ಯ ಮಿತ್ರರಿಗೂ; ತಮ್ಮ ಕೈಯಲ್ಲಾಗುವ ಮಟ್ಟಿಗೂ ಈ ಪುಸ್ತಕವನ್ನು ಅಂದವಾಗಿ ಅಚ್ಚುಹಾಕಿಕೊಟ್ಟಿರುವ ಬೆಂಗಳೂರು ಪ್ರೆಸ್ಸಿನವರಿಗೂ; ಇದರ ಪ್ರಕಾಶನ ಕಾರ್ಯವನ್ನು ಕೈಕೊಂಡು ಈ ಸಂಬಂಧದಲ್ಲಾಗುವ ಎಲ್ಲ ಖರ್ಚುವೆಚ್ಚಗಳನ್ನೂ ಸಂತೋಷದಿಂದ ಹೊತ್ತಿರುವ ನನ್ನ ಸ್ನೇಹಿತರಾದ ರಾಮಮೋಹನ ಕಂಪೆನಿಯ ಅಧಿಕಾರಿಗಳಿಗೂ ಈ ಮೂಲಕವಾಗಿ ಧನ್ಯವಾದಗಳನ್ನರ್ಪಿಸುತ್ತೇನೆ.

ಬೆಂಗಳೂರು,
೧೦-೧-೧೯೩೦.

**ವಿ. ಸೀ.**

# ಪಾತ್ರಗಳು

| | | |
|---|---|---|
| ರುಸ್ತುಂ | .. | ಇರಾನಿನ ಶ್ರೀಮಂತ ವೀರ. |
| ಸೊಹ್ರಾಬ್ | .. | ರುಸ್ತುಮನ ಮಗ. |
| ಕೈಖಾವೂಸ್ | .. | ಇರಾನಿನ ಪ್ರಭು. |
| ಅಫ್ರಾಸಿಯಾಬ್ | .. | ತುರಾನಿನ ಪ್ರಭು. |
| ಪೆರಾನ್‌ವೈಸಾ | .. | ತುರಾನಿನ ದಳವಾಯಿ. |
| ಸುಲೇಮಾನ್ | .. | ಸೊಹ್ರಾಬನ ಬಂಧು ; ಸ್ನೇಹಿತ. |
| ಫೆರೂದ್<br>ಗೋದರ್ಸ್<br>ಜೊವಾರಾ<br>ಫೆರಬೂಸ್ | .. | ಇರಾನಿನ ಸರದಾರರು. |
| ತಾಹಮಿನೆ | .. | ರುಸ್ತುಮನ ಹೆಂಡತಿ; ಸೊಹ್ರಾಬನ ತಾಯಿ. |
| ಮೋತಿ | .. | ದಾಸಿ. |

ಇರಾನೀ ತುರಾನೀ ಸೈನಿಕರು.

# ಸೊಹ್ರಾಬ್-ರುಸ್ತುಂ

## ದೃಶ್ಯ ೧

**ಅಡರ್‌ಬೈಜಾನ್. ಅರಮನೆಯ ಅಂತಃಪುರ. ತಾಹಮಿನೆಯು ಸುಖಾಸನದಮೇಲೆ ಕುಳಿತು ಹೆಣೆಯುತ್ತಿದ್ದವಳು ಅದನ್ನು ತೆಗೆದಿಟ್ಟು ಮಡಿಲಿನೊಳಗಿಂದ ಒಂದು ದಂತದ ಪೆಟ್ಟಿಗೆಯನ್ನು ತೆಗೆದು ನೋಡುತ್ತ, ಮೆಚ್ಚುತ್ತ ನಿಡುಸುಯ್ಯುತ್ತಿದ್ದಾಳೆ. . . . ಮೋತಿಯು ಷರಬತ್ತನ್ನು ತಂದು ನಿಲ್ಲುವಳು.**

**ಮೋತಿ**

ಏಕೆ ತಾಯಿ ನಿಟ್ಟುಸಿರುಬಿಡುತ್ತೀರಿ, ಹೀಗೆ ಚಿಂತಿಸಿ ಏನು ಪ್ರಯೋಜನ? ಅವರು ಇಲ್ಲಿಗೆ ಬರುವ ಹಾಗಿಲ್ಲ.

**ತಾಹಮಿನೆ**

ಅವರು ಇಲ್ಲಿಗೆ ಬರುವ ಹಾಗಿಲ್ಲ. ನಾನು ಅಲ್ಲಿಗೆ ಹೋಗುವ ಹಾಗಿಲ್ಲ. ಅವರು ಈವರೆಗೆ ನನ್ನನ್ನು ಮರೆತೇಹೋಗಿರುವರು.

**ಮೋತಿ**

ಏನು ಮಾಡುವುದು ತಾಯಿ, ಎಷ್ಟು ವರ್ಷಗಳಕಾಲ ಚಿಂತಿಸುವುದು? ಇರುವ ಸಂತೋಷಕ್ಕಾದರೂ ತೃಪ್ತಿಪಟ್ಟುಕೊಳ್ಳುವುದು ಒಳ್ಳೆಯದು. ಪತಿಯಿಂದ ಅಗಲಿದ್ದರೂ ಮಗನು ಹತ್ತಿರವಿದ್ದಾನೆ. ಆತನನ್ನು ನೋಡಿಕೊಂಡು ಕಾಲಹಾಕಬೇಕು.

**ತಾಹಮಿನೆ**

ಹೌದು, ಉಳಿದಿರುವುದು ಅದೊಂದೇ ಸಂತೋಷ. ಆದರೂ, ಮೋತಿ, ಆ ಮಗುವಿನ ಚಿಂತೆ ಈ ನಾಲ್ಕೈದು ದಿನಗಳಿಂದ ಅತಿಯಾಗಿದೆ. ಅವನೂ ಎಲ್ಲಿ ಕೈಬಿಟ್ಟು ಹೋಗುವನೊ ಎಂಬ ಶಂಕೆ ಬಲವಾಗಿದೆ. ಮೊದಲಿನಿಂದಲೂ ಭಯವೇ. ಆದರೂ ಈಗ

ಮಿತಿಮೀರಿ ಕಳವಳ ತೋರುತ್ತಿದೆ. ಏನು ಮಾಡುವುದಕ್ಕೂ ತೋಚದು.

**ಮೋತಿ**

ಪ್ರೀತಿಯ ಸ್ವಭಾವವೇ ಹೀಗೆ: ಇಲ್ಲದ ಸಲ್ಲದ ಭಯಗಳನ್ನು ಕಲ್ಪಿಸಿಕೊಂಡು ಕಳವಳಪಡುವುದು.

**ತಾಹಮಿನೆ**

ಹಾಗಲ್ಲವೇ. ಇಷ್ಟು ದಿನವೂ ಇಲ್ಲದಿದ್ದ ಮೂಕಯಾತನೆಯೊಂದು ಈ ನಾಲ್ಕೈದು ದಿನಗಳಿಂದಲೂ ಆ ಭಯವನ್ನು ಅತಿಯಾಗಿ ಹೆಚ್ಚಿಸಿದೆ.

**ಮೋತಿ**

ಸುಲ್ತಾನರಿಗೆ ತಿಳಿಸಿ. ಸೊಹ್ರಾಬರ ಮನಸ್ಸು ಬೇರೆ ಎತರಲ್ಲಾದರೂ ಪ್ರವರ್ತಿಸುವಂತೆ ಅವರು ಮಾಡಿಯಾರು.

**ತಾಹಮಿನೆ**

ಅವರಿಗೆ ಸಾಧ್ಯವಿಲ್ಲ. ಅವರೂ ವ್ಯಸ್ತರಾಗಿದ್ದಾರೆ. ಈ ನಡುವೆ ಅವನಿಗೆ ಪ್ರಪಂಚದಲ್ಲಿನ ಯಾವುದೂ ಬೇಡವಾಗಿದೆ. ಕೊರಗು ಕೊರೆಯುತ್ತಿದೆ. ಯಾರು ಏನು ಹೇಳಿದರೂ ಕೇಳ. ಅವನ ಹಟವನ್ನು ನೀನು ನೋಡಿಯೇ ಇರುವೆಯಲ್ಲ!

**ಮೋತಿ**

ಮೊಹರುನ್ನೀಸಳಲ್ಲಿ ಆತನಿಗೆ ಆಸಕ್ತಿ ಬರುವಂತೆ ಮಾಡುವುದಕ್ಕಾಗುವುದಿಲ್ಲವೆ? ಪ್ರೇಮ ಬೆಳೆಯುವಂತಾದರೆ ಹಳೆಯ ಚಿಂತೆಗಳನ್ನು ಬಿಟ್ಟಾರೊ ಏನೊ.

**ತಾಹಮಿನೆ**

ನಿನಗಿನ್ನೂ ಅವನ ಸ್ವಭಾವವು ಅರ್ಥವಾಗಿಲ್ಲ, ಮೋತಿ.

**(ಒಳಗಿನಿಂದ 'ಅಮ್ಮಾ, ಅಮ್ಮಾ, ಬಾಗಿಲು' ಎಂದು ಬಾಗಿಲು ತಟ್ಟುವ ಶಬ್ದದೊಡನೆ ಕೇಳಿಸುವುದು.)**

(ಆಲಿಸಿ) ಯಾರು, ಸೊಹ್ರಾಬ್? ಬಾ ಮಗು, ಬೇರೆ ಯಾರೂ ಇಲ್ಲ,—ಮೋತಿ; ಮುಂದಿನ ಬಾಗಿಲು ಹಿಡಿದು ನೂಕು. ಒಳಗೆ ಬಾ.

### ಸೊಹ್ರಾಬ್

(ಹೊರಗಿನಿಂದಲೆ) ಒಳಗಡೆ ಅಗಳಿ ಹಾಕಿಲ್ಲವೆ? ಹಾಕಿದೆಯೆಂದು ಕೊಂಡಿದ್ದೆ.

(ಬಾಗಿಲನ್ನು ನೂಕಿ ಒಳಗೆ ಬರುವನು. ಮುಖದಲ್ಲಿ ಅಶಾಂತಿ ಉದ್ವೇಗಗಳೂ ನಿರ್ಧಾರವೂ ಕಾಣುತ್ತವೆ.)

ಮೋತಿ, ಹೋಗಿ ಇನ್ನೊಂದು ಲೋಟ ಷರಬತ್ತು ತೆಗೆದು ಕೊಂಡು ಬಾ; ಹಾಗೆಯೇ ಕುದುರೆಯುವಸಿಗೆ ಕುದುರೆಯನ್ನು ಸವಾರಿಗೆ ಸಿದ್ಧಮಾಡುವಂತೆ ಹೇಳಿ ಬಾ.

(ಮೋತಿಯು ಯಜಮಾನಿಯ ಕಡೆ ನೋಡುತ್ತಾ ಹೋಗುವಳು.)

### ತಾಹಮಿನೆ

ಇದೇನೀ ಅವಸರ ಇಷ್ಟು ಹೊತ್ತಿನಲ್ಲಿ? ಮುಖದಲ್ಲಿ ಈ ಉದ್ವೇಗವೇಕೆ, ಮಗು? ನನ್ನ ಕೈಯಲ್ಲಿ ಹೇಳಬಾರದೆ? (ಅವನ ತಲೆ ಕೂದಲನ್ನು ನೇವರಿಸುತ್ತ) ಸ್ವಲ್ಪವೂ ವಿಶ್ರಾಂತಿಯೇ ಬೇಡವೆ, ಕಂದ—ಯಾವಾಗಲೂ ಬೇಟೆ ಕಾಳೆಗಗಳಲ್ಲಿಯೆ ಇದ್ದರೆ ಹೇಗೆ?

### ಸೊಹ್ರಾಬ್

ಅಮ್ಮಾ, ನೀವು ಕೋಪಿಸಿಕೊಳ್ಳದಿದ್ದರೆ ಒಂದು ಮಾತನ್ನು ಕೇಳಬೇಕೆಂದಿದ್ದೇನೆ, ಕೊನೆಯ ಸಾರಿ.

### ತಾಹಮಿನೆ

(ಬೆಚ್ಚಿ, ಬೆದರಿ) ಏನು ಮಾತು—ಅದುತಾನೆ? ಏಕೆ ಮಗು, ಹೀಗೆ ಮುಷ್ಕರ ಮಾಡುತ್ತಿ? ಅದೊಂದು ಬಿಟ್ಟು ಬೇರಾವುದನ್ನು ಬೇಕಾದರೂ ಕೇಳು. ನನ್ನ ಒಡಲನ್ನು ಉರಿಸುತ್ತಿರುವ ರಹಸ್ಯವಪ್ಪ ಅದು. ಬಹು ಭಯದಿಂದ ಕಾಪಾಡಿಕೊಂಡು ಬಂದಿದ್ದೇನೆ.

ಸೊಹ್ರಾಬ್

ಅಮ್ಮ, ನಿಮಗೆ ರಹಸ್ಯ; ನನಗೆ ಪ್ರಾಣಸಂಕಟ. ತಂದೆ ಯಾರೆಂದು ತಿಳಿಸದಿರುವುದು ಏನು ರಹಸ್ಯ ಹೇಳಿ; ಇದೇನು ಸಂಚು ನಿಮ್ಮದೆಲ್ಲ? ನನ್ನ ತಾಯಿಯ ಗೌರವಕ್ಕೆ ಯಾವ ಹಾನಿಯೂ ಇಲ್ಲತಾನೆ?

ತಾಹಮಿನೆ

ಕಠಿನ ನುಡಿಯ ಬೇಡ ಮಗು. ನನ್ನ ಸಂಕಟವು ನಿನಗೆ ತಿಳಿಯಬಾರದೆಂದೇ ನಾನದನ್ನು ಮರೆಮಾಡಿರುವುದು.

ಸೊಹ್ರಾಬ್

ನನ್ನ ಸೌಖ್ಯವು ನಿಮಗೆ ಬೇಕಿಲ್ಲವೆ?

ತಾಹಮಿನೆ

ಹಾಗೆಂದರೇನು? ಒಂದು ನಿಮಿಷ ನೀನು ಕಣ್ಮರೆಯಾದರೆ ಪ್ರಾಣವು ತಲ್ಲಣಿಸುತ್ತದೆ.

ಸೊಹ್ರಾಬ್

ನನಗೊ? ನಾನೆಷ್ಟು ಬಾರಿ, ಎಷ್ಟು ವಿಧವಾಗಿ ಬೇಡಿಕೊಂಡಿದ್ದೇನೆ! ನನ್ನ ವಿಚಾರವಾಗಿ ನಿಮಗೆ ಸ್ವಲ್ಪವೂ ಕರುಣೆ ಬೇಡವೆ?

ತಾಹಮಿನೆ

ಹೇಳುವುದಕ್ಕೆ ನನಗೆ ನನ್ನಲ್ಲಿಯೇ ನಂಬಿಕೆಯಿಲ್ಲ ಸೊಹ್ರಾಬ್. ಅದಕ್ಕಾಗಿ ಹೇಳಲಿಲ್ಲ.

ಸೊಹ್ರಾಬ್

ನಿಮ್ಮಲ್ಲಿ ನಿಮಗೇ ಏಕೆ ನಂಬಿಕೆಯಿಲ್ಲ? ನಾನು ಈ ಮಾತನ್ನೆತ್ತಿದೆನೆಂದರೆ ಸರಿ, ನಿಮ್ಮ ಕಣ್ಣಿನಲ್ಲಿ ನೀರುತುಂಬುವುದು. ಏನು ಪ್ರಮಾದ ಹೇಳಬಾರದೆ? ಹೇಳಿದುದನ್ನು ಅರ್ಥಮಾಡಿಕೊಳ್ಳುವ ಯೋಗ್ಯತೆಯಿಲ್ಲವೆ, ವಯಸ್ಸಿಲ್ಲವೆ ನನಗೆ? ಇಹಲೋಕದಲ್ಲಿನ

ಯಾವ ವಸ್ತುವನ್ನಾದರೂ ತಂದುಕೊಟ್ಟು ನಿಮ್ಮ ದುಃಖವನ್ನಿಳಿಸ ಬಲ್ಲೆ, ತಾಯಿ. ಪೌರುಷದಿಂದ ಸಾಧ್ಯವಾಗುವುದಾದರೆ ಸ್ವರ್ಗ ವನ್ನೇ ಸೆರೆಹಿಡಿದು ತರುತ್ತೇನೆ. ಈವೊತ್ತು ಕೇಳಿದ ಮಾತು ನಿಜವೆ?

**ತಾಹಮಿನೆ**

ಏನು, ಏನು ಮಾತು ಮಗು?

**ಸೊಹ್ರಾಬ್**

ನಾನು ರುಸ್ತುಮರ ಮಗನೆಂದು.

**ತಾಹಮಿನೆ**

ಅಯ್ಯೋ, ನಿನಗೆ ಯಾರು ಹೇಳಿದರು? ನಾನು ಕೆಟ್ಟೆ.

(ನೆಲದ ಮೇಲೆ ಬೀಳುವಂತಾಗುವಳು.)

**ಸೊಹ್ರಾಬ್**

(ಬೀಳದಂತೆ ಮೃದುವಾಗಿ ಹಿಡಿದು ಗಾಳಿ ಹಾಕುತ್ತಾ) ಬಾಪರೆ, ಇದು ನಿಜ! ಇಂಥಾ ಸಂತೋಷದ ವಿಷಯುವನ್ನು ಮುಚ್ಚಿಡಬೇಕಾಗಿತ್ತೆ? ಅಮ್ಮ, ನಿಮ್ಮ ಅಪನಂಬಿಕೆಗೆ ಕಾರಣ ಗೊತ್ತಾಯಿತು. ನಾನು ಈ ಕ್ಷಣವೇ ಹೋಗಿ ಅವರನ್ನು ಕರೆತರುತ್ತೇನೆ, ನೀವು ಚಿಂತಿಸಬೇಡಿ.

**ತಾಹಮಿನೆ**

ಬೇಡ ಬೇಡ, ಸೊಹ್ರಾಬ್. ಯಾವುದು ಆಗಬಾರದೆಂದು ಇಷ್ಟು ವರ್ಷಗಳಿಂದಲೂ ಪ್ರಯತ್ನಪಟ್ಟೆನೊ ಅದೇ ಆಯಿತು. ಅದಕ್ಕಾಗಿಯೇ ನಿನ್ನ ಜನ್ಮದ ಸಂಗತಿಯನ್ನು ಗೋಪ್ಯವಾಗಿಟ್ಟು ಕೊಂಡಿದ್ದೆ. ಮುಂದಿನ್ನೇನು ಗತಿ?

**ಸೊಹ್ರಾಬ್**

ನನ್ನ ಮಾತಿನಲ್ಲಿ ಅಪನಂಬಿಕೆಯೆ?

**ತಾಹಮಿನೆ**

ಇಲ್ಲ, ನನ್ನ ಶಕ್ತಿಯಲ್ಲಿ.

**ಸೊಹ್ರಾಬ್**

ಅದು ಹೇಗೆ?

### ತಾಹಮಿನೆ

ಈ ಸಮಾಚಾರವು ನಿನ್ನ ಕಿವಿಗೆ ಮುಟ್ಟಿದ ಕೂಡಲೆ ನಿನ್ನನ್ನು ತಡೆಯುವ ಶಕ್ತಿಯು ನನಗಿಲ್ಲದಾಗುವುದೆಂದು ಮುಂಚಿನಿಂದ ನನಗೆ ಗೊತ್ತು. ಎಲ್ಲ ಸುಖಗಳೂ ಆಸೆಗಳೂ ಹೋಗಿದ್ದರೂ, ಚಿನ್ನ, ನಿನ್ನನ್ನು ನೋಡಿಕೊಂಡು ಬದುಕಿದ್ದೆ; ಈಗ ನೀನೂ ನನ್ನನ್ನು ಬಿಟ್ಟುಹೋದರೆ ನನಗೆ ಪ್ರಪಂಚದಲ್ಲಿ ಉಳಿವುದೇನಿದೆ?

### ಸೊಹ್ರಾಬ್

ಅಮ್ಮಾ, ಇದೇಕೆ ಹೀಗೆ ಮಾತನಾಡುತ್ತೀರಿ? ನಾನು ನಿಮ್ಮನ್ನು ಪ್ರೀತಿಸುವುದಿಲ್ಲವೆ? ಇದೊ ಹೊರಟೆ. ಅವರೆಲ್ಲಿದ್ದರೂ ಹುಡುಕಿಕೊಂಡು ಬರುವೆನು....ಅದೂ ಅಲ್ಲದೆ, ಎಷ್ಟು ದಿನಗಳ ಮಹದಾಸೆಯು ಕೈಗೂಡಿದಂತಾಗುವುದು!....ಒಮ್ಮೆ ಅವರನ್ನು ನೋಡಿ ಎಲ್ಲವನ್ನೂ ತಿಳಿಸಿ ಅವರನ್ನಿಲ್ಲಿಗೆ ಕರೆತರುವೆನು. ಆಗ ನಿಮ್ಮ ಸೊಹ್ರಾಬನು ನಿಮಗೆ ತಕ್ಕ ಸೇವೆಮಾಡಿದಂತಾಗುವುದು. ಇಂಥ ತಾಯಿತಂದೆಯವರನ್ನು ಪಡೆದು ಅವರನ್ನು ಸಂತೋಷಗೊಳಿಸದ ಮಗನಿದ್ದರೇನು, ಇಲ್ಲದಿದ್ದರೇನು? ಆದರೆ ಇನ್ನೊಂದು ಪ್ರಶ್ನೆ— ನನ್ನನ್ನು ನೋಡುವುದಕ್ಕೂ ಕೂಡ ಅವರು ಇಷ್ಟು ದಿನಗಳವರೆಗೂ ಬಾರದಿರುವುದೇಕಮ್ಮ? ನಿಮಗೂ ಅವರಿಗೂ ಮನಸ್ತಾಪ ಬಂದಿತ್ತೆ?

### ತಾಹಮಿನೆ

ಮನಸ್ತಾಪವೆ? ಇಲ್ಲ ಮಗು—ನನ್ನ ಕರ್ಮ.

### ಸೊಹ್ರಾಬ್

ಕರ್ಮವೆಂದರೇನು? ನೀವೇನು ಮಾಡಿದಿರಿ?

### ತಾಹಮಿನೆ

ಅವರ ಮರೆವಿಗೂ ಅನಾದರಕ್ಕೂ ಪಾತ್ರಳಾಗುವುದಕ್ಕೆ ಎಷ್ಟನ್ನು ಮಾಡಬಹುದಾಗಿತ್ತೊ ಅಷ್ಟನ್ನೂ ಮಾಡಿದೆ.

**ಸೊಹ್ರಾಬ್**

ಎಂದರೆ?

**ತಾಹಮಿನೆ**

ಮಗನು ಹುಟ್ಟಿದನೆಂದು ಅವರಿಗೆ ತಿಳಿದಿದ್ದರೆ ಅವರು ಹಿಂದಿರುಗಿ ಬರುತ್ತಿದ್ದರು.

**ಸೊಹ್ರಾಬ್**

ಮಗನೇ ಹುಟ್ಟಲಿಲ್ಲವೆ?

**ತಾಹಮಿನೆ**

ನಿಜ. ಗಂಡುಮಗು ಹುಟ್ಟಿತೆಂದು ತಿಳಿಸಿದ್ದರೆ ನಿನ್ನನ್ನು ಕರೆದುಕೊಂಡುಹೋಗಿ ಯುದ್ಧಕ್ಕೆ ತರಬಿಯತ್ತು ಮಾಡಿ ತಮ್ಮಂತೆಯೇ ರಣವಿದ್ಯೆ ಕಲಿಸುವರೆಂದು ಹೆದರಿ—ನಿನ್ನನ್ನು ಕಳೆದುಕೊಳ್ಳುವೆನೆಂದು ಹೆದರಿ—ನನ್ನ ಬಳಿಯೇ ನಿನ್ನನ್ನು ಉಳಿಸಿಕೊಳ್ಳಬೇಕೆಂದು ಆಸೆಪಟ್ಟು, ಹೆಣ್ಣು ಹುಟ್ಟಿತೆಂದು ಅವರಿಗೆ ಸುಳ್ಳು ಸಮಾಚಾರ ಕೊಟ್ಟೆವು. ಬೇಸರದಿಂದ ಅವರು ಇಲ್ಲಿಗೆ ಬರಲಿಲ್ಲ. ಬೇರೇನೂ ಇಲ್ಲ.

**ಸೊಹ್ರಾಬ್**

ಮಹಾಪರಾಧ ಮಾಡಿದಿರಿ—ಮಹಾಪರಾಧ ಮಾಡಿದಿರಿ.. ಆದರೂ ಮಿಂಚಲಿಲ್ಲ ತಾಯಿ. ಸತ್ಯಾಂಶವನ್ನು ತಿಳಿಸಿ ಅವರನ್ನು ಖಂಡಿತವಾಗಿಯೂ ಕರೆತರುವೆನು.

**ತಾಹಮಿನೆ**

ಇಷ್ಟು ದಿನಗಳಮೇಲೆ ಅವರು ನಂಬರು ಮಗು; ಕೋಪಿಸಿಕೊಳ್ಳುವರು. ಯಮನ ಕೋಪದಂತೆ ಅವರ ಕೋಪವು ಭಯಂಕರ. ನನ್ನಮೇಲೆ ಬಹು ಆಗ್ರಹಗೊಳ್ಳುವರು; ಬೇಡಪ್ಪ.

**ಸೊಹ್ರಾಬ್**

ತ್ಚ್! ತ್ಚ್! ನಾನೆಲ್ಲವನ್ನೂ ಸರಿಪಡಿಸುವೆನು. ಆಶೀರ್ವಾದ ಮಾಡಿ. ಎಲ್ಲಿಯೂ ನಿಲ್ಲದೆ ಪ್ರಯಾಣಮಾಡಿ ಅವರನ್ನು ಹುಡುಕಿಕೊಂಡು ಬರುವೆನು.

## ತಾಹಮಿನೆ

(ಅವನ ತಲೆಯಮೇಲೆ ಮುಖವಿಟ್ಟು, ಕಣ್ಣೀರಿಂದ) ನನಗೆ ಭಯವಾಗುತ್ತಿದೆ, ಸೊಹ್ರಾಬ್. ಈಗ ಬೇಡ, ಕೆಲವು ದಿನ ತಾಳು. ನಿಧಾನದಲ್ಲಿ ಯೋಚಿಸಿ ತೀರ್ಮಾನಮಾಡೋಣ.

## ಸೊಹ್ರಾಬ್

ಶುಭಕ್ಕೆ ನಿಧಾನಮಾಡಬಾರದು. ಇಂದಿನಿಂದ ಮೂರು ತಿಂಗಳು ಕಳೆಯುವುದರೊಳಗಾಗಿ ಎಲ್ಲಿದ್ದರೂ ಅವರೊಡನೆ ಹಿಂದಿರುಗಿ ಬರುವೆನು.

## ತಾಹಮಿನೆ

ಈವರೆಗೂ ಒಂದು ದಿನ ನಿನ್ನನ್ನು ಬಿಟ್ಟಿರಲಿಲ್ಲ; ಮೂರು ತಿಂಗಳ ಕಾಲವನ್ನು ಹೇಗೆ ಕಳೆಯಲಿ? ನಾನೂ ನಿನ್ನೊಡನೆ ಬರುತ್ತೇನೆ ನಡೆ.

## ಸೊಹ್ರಾಬ್

ಛೆ, ನೀವೆಂದರೇನು ಬರುವುದೆಂದರೇನು? ನೀವು ಸ್ವಲ್ಪವೂ ಚಿಂತಿಸ ಕೆಲಸವಿಲ್ಲ. ಇಗೋ ಎನ್ನುವುದರಲ್ಲಿ ಬಂದುಬಿಡುತ್ತೇನೆ.

(ಮೊಳಕಾಲೂರಿ ನಮಸ್ಕಾರಮಾಡುವನು.)

## ತಾಹಮಿನೆ

ದೇವರಿಚ್ಛೆ ಹೇಗಿದ್ದರೆ ಹಾಗಾಗಲಿ. ಕಸ್ತೂರಿಯನ್ನು ಮುಚ್ಚಿಟ್ಟು ಗೋಪ್ಯಮಾಡುವುದು ಸಾಧ್ಯವೆ? ಮಾಡುವೆನೆಂಬ ನನ್ನ ಪ್ರಯತ್ನವು ಮರುಳಾಟವಲ್ಲವೆ? ಇದರಿಂದ ಏನೇನಾಗಬೇಕೊ, ಏನೇನಾಗುವುದೊ! ಸ್ವಲ್ಪ ತಾಳು, ಸೊಹ್ರಾಬ್, (ಎಂದು ಕಿರುಪೆಟ್ಟಿಗೆಯಿಂದ ಒಂದು ತಾಯಿತಿ ತೆಗೆದು ಅವನ ಬಲತೋಳಿಗೆ ಕಟ್ಟಿ ಅದನ್ನು ಮುತ್ತಿಟ್ಟು) ಇದು ನಿನಗೆ ರಕ್ಷಾಬಂಧನ. ನಿಮ್ಮ ತಂದೆಯವರಿಗೆ ಗುರುತೂ ನೆನಪೂ ಆಗುತ್ತವೆ. ಇದನ್ನು ನಿನ್ನ ದೇವರಂತೆ ಕಾಪಾಡಿಕೊ..... ಇನ್ನೊಂದು ಮಾತು: ಇನ್ನು ಮುಂದಿನ ಮೂರು

ತಿಂಗಳೂ ಮುಳ್ಳಿನ ಮೇಲಿರುವಂತೆ ದಿನಗಳನ್ನೆಣಿಸುತ್ತಿರುತ್ತೇನೆ. ಆವೊಳಗಾಗಿ ನೀನು ಬಾರದಿದ್ದರೆ ಆಮೇಲೆ ಒಂದು ಘಳಿಗೆ ಕಾಲ ನಾನು ಪ್ರಾಣವನ್ನಿಟ್ಟುಕೊಂಡಿರುವುದಿಲ್ಲ.

**ಸೊಹ್ರಾಬ್**

ಆವರೆಗೂ ಸಂಬಿಕೆಯಿಟ್ಟು, ನೀವು ಸೊಹ್ರಾಬನ ವೀರ ಮಾತೆಯಂತೆ, ರುಸ್ತುಮರ ವೀರಪತ್ನಿಯಂತೆ ನಡೆದುಕೊಳ್ಳ ಬೇಕು.

**ತಾಹಮಿನೆ**

ಶಕ್ತಿಮೀರಿ ಪ್ರಯತ್ನಿಸುವೆನು. ಆದರೆ ಎಲ್ಲಿಯೇ ಆಗಲಿ, ಯಾವ ಕಾರಣದಿಂದಲೇ ಆಗಲಿ, ನಿಮ್ಮ ತಂದೆಯನ್ನಿದಿರಿಸಿ ಯುದ್ಧಮಾಡಬೇಡ.

**ಸೊಹ್ರಾಬ್**

ಎಂದಿಗಾದರೂ ಮಾಡಿಯೇನೇ !

**ತಾಹಮಿನೆ**

ಒಳ್ಳೆಯದು ಹೋಗಿ ಬಾ... (ಕಣ್ಣೀರು ತುಂಬಿ ಅವನನ್ನು ಕಳುಹಿಸುವಳು. ಅದೇ ದಾರಿಯಲ್ಲಿ ಒಂದೇ ಸವನೆ ನೋಡುತ್ತಿದ್ದು, ಕೆಳಗೆ ಕುಸಿದು ಕುಳಿತು, ತಲೆಯಮೇಲೆ ಕೈಗಳನ್ನಿಟ್ಟು ಬಿಕ್ಕಿ ಬಿಕ್ಕಿ ಬರುವ ಅಳುವನ್ನು ತಡೆದು) ಖುದಾ! ಮಗು ನನ್ನದಲ್ಲ, ನಿನ್ನದು. ಅದನ್ನು ಕಾಪಾಡುವ ಭಾರ ನಿನ್ನಮೇಲಿದೆ. ಇಗೊ ನಿನ್ನ ಕೈಗೆ ಒಪ್ಪಿಸಿದ್ದೇನೆ.

ತೆರೆ.

---

## ದೃಶ್ಯ ೨

**ಅರಮನೆಯ ಹೊರಅಂಗಳದಲ್ಲಿ ಕುದುರೆಯನ್ನು ನಿಲ್ಲಿಸಿ ಬಂದು ಕುದುರೆಯವನು ಸೊಹ್ರಾಬನಿಗೆ ಸಲಾಂ ಮಾಡುವನು.**

**ಸೊಹ್ರಾಬ್**

ಕುದುರೆಯು ಸಿದ್ಧವಾಯಿತೇನು?

**ಕುದುರೆಯವನು**

ಆಗಿದೆ ಪ್ರಭು (**ಆಚೆಯ ಕಡೆ ಮರ್ಯಾದೆಯಿಂದ ತಲೆಬಾಗಿ, ಸಲಾಂ ಮಾಡಿ**) ಸುಲ್ತಾನರು ಜನಾಬ್!

**ಸುಲ್ತಾನ್**

(**ಸೊಹ್ರಾಬನ ಹತ್ತಿರ ಬಂದು ಭುಜದಮೇಲೆ ಕೈಯಿಟ್ಟು**) ನನಗೆ ಸಮಾಚಾರ ತಿಳಿಸದೇ ಹೊರಟುಹೋಗಬಹುದೆ? ಅನ್ಯಾಯ ಸೊಹ್ರಾಬ್.

**ಸೊಹ್ರಾಬ್**

ಇಲ್ಲ, ತಾತ··ಇದೇನು ಮಹಾವಿಚಾರ, ಜಾಗ್ರತೆ ಬಂದು ಬಿಡುತ್ತೇನೆ. ತಮಗೆ ತಿಳಿಸಿರೆಂದು ಅಮ್ಮನಿಗೆ ಹೇಳಿ ಬಂದೆ.

**ಸುಲ್ತಾನ್**

ಇನ್ನೆರಡು ದಿನ ತಾಳು. ನಾನೇ ರುಸ್ತುಮರನ್ನು ಹುಡುಕಿಸಿ ಅವರಿಗೆ ಸಮಾಚಾರವನ್ನು ತಿಳಿಸುತ್ತೇನೆ. ಅವರು ಇಲ್ಲಿಗೆ ಬರುವಹಾಗೆ ಹೇಳಿಕಳುಹಿಸುತ್ತೇನೆ.

**ಸೊಹ್ರಾಬ್**

ಆಗದು. ನಾನೇ ಅವರನ್ನು ಹುಡುಕಿ ತರಬೇಕು. ಅಷ್ಟಲ್ಲದೆ ನನಗೆ ಸಂತೋಷವಾಗದು. ಅವರ ವಿಚಾರದಲ್ಲಿ ನಡೆಸಿರುವ ಅಪಚಾರಕ್ಕೆ ತಕ್ಕ ರೀತಿಯಲ್ಲಿ ಕ್ಷಮಾಪಣೆ ಬೇಡಬೇಕಾದವರು ನಾವು.

ಸುಲ್ತಾನ್

ಎಲ್ಲಿಗೆಂದು ಹೋಗುವೆ? ಅವರು ಊರಲ್ಲಿಯೇ ಇದ್ದರೆ ಸರಿಹೋಯಿತು. ಇಲ್ಲವಾದರೆ ಎಲ್ಲೆಂದು ಹುಡುಕಿಕೊಂಡು ಹೋಗುವುದು? ನಿಮ್ಮ ತಾಯಿ ನಿನ್ನನ್ನಗಲಿರಲಾರಳು. ದಾರಿಯಲ್ಲಿ ಉದ್ದಕ್ಕೂ ನಮಗೆ ಶತ್ರುಗಳು. ಟಾರ್ಟರಿ ಪರ್ಷ್ಯಾಗಳಿಗೆ ಘೋರ ವಾದ ಯುದ್ಧ ನಡೆಯುವ ಸಂಭವವೂ ಇದೆಯೆಂದು ಕೇಳಿದ್ದೇನೆ. ಎಲ್ಲೆಲ್ಲೂ ಯುದ್ಧಸನ್ನದ್ಧರಾಗುತ್ತಿದ್ದಾರೆ. ಈ ಸಮಯವು ನಿನ್ನ ಕಾರ್ಯಕ್ಕೆ ಅನುಕೂಲವಾಗಿಲ್ಲ.

ಸೊಹ್ರಾಬ್

ನಾನು ಇದನ್ನೇ ಅನುಕೂಲ ಮಾಡಿಕೊಳ್ಳಬೇಕೆಂದಿದ್ದೇನೆ, ತಾತ.

ಸುಲ್ತಾನ್

ಹೇಗೆ?

ಸೊಹ್ರಾಬ್

ಹಿಂದಾರೂ ಹುಡುಕದಿರುವ ರೀತಿಯಲ್ಲಿ ನಾನು ತಂದೆಯವ ರನ್ನು ಹುಡುಕಿಕೊಂಡು ಹೋಗಿ ಅವರನ್ನು ಕಾಣುವೆನು. ರುಸ್ತುಮರ ಮಗನಿಗೆ ಅದೇನೂ ಹೆಚ್ಚಿನದಲ್ಲ.

ಸುಲ್ತಾನ್

ಮತ್ತೆ?

ಸೊಹ್ರಾಬ್

ಯುದ್ಧರಂಗಗಳಲ್ಲಿ, ಹೋರಾಟಗಳ ಮಧ್ಯದಲ್ಲಿ, ರಣಭೇರಿ ಗಳ ಚೀರುಹೊಯಿಲಿನ ನಡುವೆ, ಹಿಂದಾರೂ ಯುದ್ಧಮಾಡದಿರುವ ರೀತಿಯಲ್ಲಿ ಯುದ್ಧಮಾಡಿ ಕೀರ್ತಿಪಡೆದು, ತಂದೆಯವರು ಎದುರಿ ಗಿದ್ದರೆ ಅವರು ತಮಗೆ ತಕ್ಕ ಮಗನೆಂದು ನನ್ನನ್ನು ಒಪ್ಪುವಂತೆ, ತಿಳಿದು ಸಂತೋಷದಿಂದ ಹಿಗ್ಗುವಂತೆ ಮಾಡಿ, ಅವರನ್ನು ಒಲಿಸು ವೆನು. ಆಮೇಲೆ ವೃತ್ತಾಂತವನ್ನು ಹೇಳುವೆನು.

### ಸುಲ್ತಾನ್

ನೀನು ಶುದ್ಧ ಹುಡುಗ. ಪ್ರಪಂಚ ತಿಳಿಯದವನು. ಯುದ್ಧ ರಂಗದಲ್ಲಿ ತಂದೆಯನ್ನು ಕಾಣುವುದೆಂದರೇನು? ಅದು ಕ್ಷೇಮ ವಲ್ಲ, ಬೇಡ. ಅಲ್ಲದೆ ಅಪಾಯವುಂಟು; ನನ್ನ ಮಾತನ್ನು ಕೇಳು.

### ಸೊಹ್ರಾಬ್

ನಿಮ್ಮೆಲ್ಲರಿಗೂ ಕೀರ್ತಿ ತರುವುದು ನನ್ನ ಕರ್ತವ್ಯ. ತಮ್ಮ ಮಗನು ನಾಡಾಡಿ ಹುಡುಗರಂತಲ್ಲ ಎಂದು ಅವರು ಅರಿಯ ಬೇಡವೆ? ಅವರೇ ಅಭಿಮಾನದಿಂದ ಹಿಗ್ಗುವಂಥ ಸಾಹಸಗಳನ್ನು ನಾನು ಮಾಡಲಾರೆನಾದರೆ ನಾನು ನಿಮ್ಮ ಮೊಮ್ಮಗನಾದೇನೆ? ಅವರಿಗೆ ಸರಿಯಾದ ಮಗನಾದೇನೆ?

### ಸುಲ್ತಾನ್

ನಿನ್ನಿಷ್ಟಬಂದಂತೆ ಮಾಡು. ಆದರೆ ಜೋಕೆಯಿಂದಿರು. ನಿನ್ನನ್ನು ಬಿಟ್ಟು ನಮಗಿನ್ನಾರೂ ಇಲ್ಲ. ನಿನ್ನ ತಾಯಿಯ ಹಂಬಲನ್ನೂ ಪಾಡನ್ನೂ ಮರೆಯಬೇಡ. ಜೊತೆಗೆ ಹತ್ತು ಜನರನ್ನು ಕರೆದುಕೊಂಡು ಹೋಗು.

### ಸೊಹ್ರಾಬ್

ಬೇಡ. ನಾನು ಏಕಾಕಿಯಾಗಿ ಹೋಗುವುದು ಉಚಿತ. ಆದರೂ ಸುಲೇಮಾನಿನ ಕಾಟ ಬಹಳವಾಗಿದೆ. ಆತನೊಬ್ಬನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತೇನೆ. ಬೇರಾರೂ ಬೇಕಾಗಿಲ್ಲ. ಒಬ್ಬರಿಬ್ಬರಾದರೆ ನಾವು ಹೆಚ್ಚು ಸ್ವತಂತ್ರವಾಗಿರಬಹುದು. ನಿಮಗೆ ವ್ಯಾಕುಲ ಬೇಡಿ. ಜಾಗ್ರತೆಯಾಗಿ ಹಿಂದಿರುಗುವೆನು.

### ಸುಲ್ತಾನ್

ನಿನಗೆ ಜಯವಾಗಲಿ!

**(ಸೊಹ್ರಾಬನು ಕುದುರೆಯನ್ನು ಹತ್ತಿ ಹೊರಡುವನು.)**

**ತೆರೆ.**

---

## ದೃಶ್ಯ ೩

**ಸಾಮರ್ಕಂಡ್ ; ಸುಲೇಮಾನ್, ಸೊಹ್ರಾಬ್ ; ರಾಜಬೀದಿಯ ಪಕ್ಕದ ಒಂದು ಮೈದಾನದಲ್ಲಿ ; ಸಂಜೆಯ ಸಮಯ.**

**ಸೊಹ್ರಾಬ್**

ಸುಲೇಮಾನ್! ಎಂದೂ ಇಲ್ಲದ ನಿನ್ನ ಮುಖ ಬಾಡಿರುವುದೇಕೆ? ನನ್ನ ಜೊತೆಯಲ್ಲಿದ್ದು ಸಾಕಾಯಿತೆ? ತಿರುಗಾಟ ಬಹಳ, ವಿಶ್ರಾಂತಿಯಿಲ್ಲ.

**ಸುಲೇಮಾನ್**

ಇಲ್ಲ, ಇಲ್ಲ.

**ಸೊಹ್ರಾಬ್**

ಮತ್ತೇಕೆ ಹೀಗೆ? ಸರಿಯಾಗಿ ಮಾತನಾಡೆ. ಎಂದಿನಂತೆ ಸರಸವಿಲ್ಲ, ಹಾಸ್ಯವಿಲ್ಲ; ನನ್ನ ವ್ಯಸನವನ್ನಿಳಿಸಿ ನಗುತ್ತ ನಗಿಸುತ್ತಿದ್ದ ನೀನು ಆಕಾಶವು ತಲೆಯಮೇಲೆ ಕವಿಚಿರುವವನಂತೆ ಇದ್ದೀಯೆ. ನಕ್ಕಾಗ ನನ್ನನ್ನು ಅಸಮಾಧಾನಗೊಳಿಸಕೂಡದು ಎಂಬಂತೆ ನಗುವೆ. ಹಿಂದಿನ ಉಲ್ಲಾಸವು ಸ್ವಲ್ಪವೂ ಇಲ್ಲ. ಬೇಸರವಾಯಿತೆ?

**ಸುಲೇಮಾನ್**

ಇಲ್ಲ. ನಿಮ್ಮ ಜೊತೆಯಲ್ಲಿರುವಾಗ ನನಗೆ ಬೇಸರ ಹೇಗೆ ಬರಬೇಕು? ನೀವು ಕಣ್ಣುಸನ್ನೆಮಾಡಿದರೆ ನಿಮ್ಮ ಹಿಂದೆ ನಾನು ಸೈತಾನನ ಲೋಕಕ್ಕಾದರೂ ಸಂತೋಷವಾಗಿ ಬರಬಲ್ಲೆ.

**ಸೊಹ್ರಾಬ್**

ಹಾಗಾದರೆ?

**ಸುಲೇಮಾನ್**

ಬೇರೇನೂ ಇಲ್ಲ. ನೀವು ನಿನ್ನೆ ಹೇಳಿದ ವಿಚಾರ.

**ಸೊಹ್ರಾಬ್**

ಯಾವ ವಿಚಾರ? ಓ—ನಾನು ಅಫ್ರಾಸಿಯಾಬರ ದಂಡಿಗೆ ಸೇರುವೆನೆಂದದ್ದೇ?

**ಸುಲೇಮಾನ್**

— — —

**ಸೊಹ್ರಾಬ್**

ಇನ್ನೇನುಮಾಡಲಿ ಹೇಳು. ಬೇರೆ ದಾರಿ ಇಲ್ಲ. ನೀನು ಕಂಡಹಾಗೆ ಊರೂರು ಸುತ್ತಿಯಾಯಿತು. ಪಾಳೆಯ ಪಾಳೆಯ ವನ್ನೂ ಹುಡುಕಿಯಾಯಿತು. ತಂದೆಯವರು ಸಿಗಲಿಲ್ಲ. ಅವರು ಸೆಯಿಸ್ಥಾನವನ್ನು ಬಿಟ್ಟು ಹದಿನೈದು ದಿನಗಳಾದುವಂತೆ. ನಮಗೆ ಸಿಕ್ಕುವ ಬಗೆ ಹೇಗೆ?

**ಸುಲೇಮಾನ್**

ಶತ್ರುಗಳ ದಂಡಿನಲ್ಲಿ ಸೇರಿಕೊಂಡರೆ ಸಿಕ್ಕುವರೆ?

**ಸೊಹ್ರಾಬ್**

ಹೆಚ್ಚು ಸಂಭವವುಂಟು.

**ಸುಲೇಮಾನ್**

ಹೆಚ್ಚು ಸಂಭವವುಂಟು?

**ಸೊಹ್ರಾಬ್**

ಉಂಟು. ಸೈನ್ಯಕ್ಕೆ ಬೇರೆ ಬೇರೆ ಪ್ರಾಂತಗಳ ಜನರು ಬರುತ್ತಾರೆ. ಯಾರಿಗಾದರೂ ರುಸ್ತುಮರ ಸಂಚಾರದ ವಿಷಯ ತಿಳಿದಿರುವ ಸಂಭವವುಂಟು.

**ಸುಲೇಮಾನ್**

ತುರಾನಿಯವರು ನಿಮ್ಮನ್ನು ನಂಬುವರೆ? ನೀವು ಇರಾನೀ ಕುಲದವರೆಂದು ಅರಿತರೆ ಅಫ್ರಾಸಿಯಾಬರು ನಿಮಗೆ ಆಶ್ರಯ ವನ್ನು ಕೊಡುವರೆ? ಅವರಿಗೂ ಇರಾನಿನವರಿಗೂ ಯುದ್ಧ; ಮಿತಿ ಮೀರಿದ ವೈರ. ನೀವು ರುಸ್ತುಮರ ಮಕ್ಕಳೆಂದು ಅವರಿಗೆ ತಿಳಿದರೆ ನಿಮಗೆ ಕ್ಷೇಮವೆ?

### ಸೊಹ್ರಾಬ್

ನಿನಗೆ ಅಫ್ರಾಸಿಯಾಬರ ಗುಣ ತಿಳಿಯದು. ಅವರು ಉದಾರಿಗಳು—ಸ್ವತಃ ಶೂರರು. ಅವರೊಬ್ಬರಿಗೆ ಮಾತ್ರ ನನ್ನ ರಹಸ್ಯವನ್ನು ತಿಳಿಸುವೆನು. ದೇವರಮೇಲಾಣೆಯಿಡುವೆನು. ನನ್ನ ಉದ್ದೇಶವು ನೆರವೇರುವವರೆಗೂ ಪ್ರಾಣದಮೇಲೆ ಆಸೆ ತೊರೆದು ಅವರ ಧ್ವಜದಡಿಯಲ್ಲಿ ಯುದ್ಧಮಾಡಿ ಅವರಿಗೆ ಸೇವೆಮಾಡುವೆನು.

### ಸುಲೇಮಾನ್

ಬೆಂಕಿಯೆಂದು ತಿಳಿದು ತಿಳಿದು ಮುಂದೆ ನುಗ್ಗುವರೆ?

### ಸೊಹ್ರಾಬ್

ಬೆಂಕಿಯೆಂದು ಹೆದರಿ ನಿಂತರೆ ಕೆಲಸವಾದೀತೆ?

### ಸುಲೇಮಾನ್

ನಿಮ್ಮಷ್ಟು ತಿಳಿದವನು ನಾನಲ್ಲ. ಹಿತವನ್ನು ಬಯಸಿ ಮಾತ್ರ ಮಾತನಾಡಿದೆ.

### ಸೊಹ್ರಾಬ್

ಯೋಚನೆ ಬೇಡ, ಸುಲೇಮಾನ್. ನಿನ್ನೆಯ ಕಾಳಗದಲ್ಲಿ ಅಫ್ರಾಸಿಯಾಬರ ವಿಶ್ವಾಸವು ನನಗೆ ಸಂಪೂರ್ಣವಾಗಿ ದೊರೆತಿದೆ. ನನಗಾಗಿ ಅವರು ಏನು ಬೇಕಾದರೂ ಮಾಡುವೆನೆಂದು ವಾಗ್ದಾನ ಮಾಡಿದ್ದಾರೆ.

### ಸುಲೇಮಾನ್

ನಿಮ್ಮ ಕುಲಗೋತ್ರಗಳ ವಿಚಾರವನ್ನು ಹೇಳಿದಿರೊ?

### ಸೊಹ್ರಾಬ್

ಆಗ ಏಕೆ ಹೇಳಲಿ? ಬೇಕಾಗಲಿಲ್ಲ. ಅವರು ಕಪಟಿಗಳಲ್ಲ. ನಾನು ಬರುವಹಾಗಿದ್ದರೆ ತಮ್ಮ ಸೈನ್ಯದಲ್ಲಿ ಸರದಾರ್‌ಗಿರಿ ಕೊಡುವೆನೆಂದು ಹೇಳಿದ್ದಾರೆ. ಖಾಸಾ ತಾವು ಬೆಂಗಾವಲಿಗಾಗಿ ನನ್ನನ್ನು ಇರಿಸಿಕೊಳ್ಳುವೆನೆಂದು ಹೇಳಿದ್ದಾರೆ.

ಸುಲೇಮಾನ್

ನಿಮ್ಮ ಧೈರ್ಯ!

ಸೊಹ್ರಾಬ್

ಈ ಅಧೈರ್ಯ ನಿನಗೆಲ್ಲಿಂದ ಬಂದಿತು, ಸುಲೇಮಾನ್? ಏಕೆ ಹಾಗೆನ್ನುವೆ?

ಸುಲೇಮಾನ್

ಏಕೇ? ತಂದೆಯುವರನ್ನು ಹುಡುಕುತ್ತಿರುವವರು—ಎರಡು ತಿಂಗಳು ಕಾಲ ದೇಶ ದೇಶವೂ ಅಲೆದು ಅವರನ್ನು ಕಾಣದಿರುವವರು—ಇನ್ನೊಂದು ತಿಂಗಳು ಮುಗಿಯುವುದರೊಳಗಾಗಿ ಅವರನ್ನು ಕರೆದುತರುವೆನೆಂದು ತಾಯಿಗೆ ಭಾಷೆಕೊಟ್ಟು ಬಂದಿರುವವರು—ರುಸ್ತುಮರ ಶತ್ರುಗಳ ಕಡೆ—ತಂದೆಯ ಜನರ ಪ್ರತಿಪಕ್ಷದಲ್ಲಿ ನಿಂತು, ಬೀಡಿಂದ ಬೀಡಿಗೆ ಅದೃಷ್ಟದಿಂದ ಅದೃಷ್ಟಕ್ಕೆ ಹೋಗುತ್ತಿದ್ದರೆ ನಿಮ್ಮ ಕೆಲಸವಾಗುವುದೆ? ಯುದ್ಧದಲ್ಲಿ ಸಾವು ಬದುಕುಗಳು ನಮ್ಮಧೀನವಲ್ಲ.

ಸೊಹ್ರಾಬ್

ಸಾಕು ಸುಲೇಮಾನ್! ನಾನೇನೂ ಹೇಡಿಯಲ್ಲ. ಸಾವಿಗೆ ಹೆದರುವವನು ರುಸ್ತುಮರ ಹೆಸರನ್ನು ಬಾಯಿಯಲ್ಲಿ ಹೇಳುವುದಕ್ಕೂ ಯೋಗ್ಯನಲ್ಲ. ಆತನ ಮಗನೆಂತಾದಾನು? ಇಷ್ಟರ ಮೇಲೆ ಅದೃಷ್ಟದಲ್ಲಿದ್ದುದಾಗಲಿ. ಅವರನ್ನು ಕಾಣದೆ ನಾನು ತಾಯಿಯವರ ಬಳಿಗೆ ಹಿಂದಿರುಗಿ ಹೋಗುವುದಿಲ್ಲ.

ಸುಲೇಮಾನ್

ನಿಮ್ಮಲ್ಲಿ ಪ್ರಾಣವನ್ನಿಟ್ಟುಕೊಂಡು ಆಕೆ ಬದುಕಿದ್ದಾರೆ. ನೀವು ಅವರ ಕೈಬಿಡುವುದೆ?

ಸೊಹ್ರಾಬ್

ನನ್ನ ಮನಸ್ಸನ್ನು ಕಲಕಬೇಡ. ಅವರ ದುಃಖವನ್ನು ನಾನರಿಯೆನೆ? ಅವರಿಗೇನು ಸಂತೋಷವಿದೆ? ನನ್ನಂಥ ಮಗನಿದ್ದು,

ರುಸ್ತುಮರಂಥ ಪತಿಯಿದ್ದು, ಈ ಸುಡುವ ದುಃಖವಿರಬೇಕೆ ಅವರಿಗೆ? ಅದನ್ನು ಹರಿಸದಿರುವ ಮಗನು ನಾನಿದ್ದೇನು ಪ್ರಯೋಜನ, ನೀನೇ ಹೇಳು? ಒಂದೊಂದು ಸಲ ಅವರು ಬಿಡುವ ನಿಟ್ಟುಸಿರು ನನ್ನ ಎದೆಯನ್ನು ಸೀಳುವುದು. ಅದನ್ನು ನೋಡಿ—ಮಾತನಾಡುತ್ತಾಡುತ್ತ ಅವರ ಕಣ್ಣು ತುಂಬಿ ಗಂಟಲು ಬಿಗಿಯಾಗುವುದನ್ನು ನೋಡಿ ನಾನು ಹೇಗೆ ಸಹಿಸಿಕೊಂಡಿರಲಿ? ಇನ್ನೆಷ್ಟು ಕಾಲ ತಡೆದಿರಲಿ? ಈಗ ಹೇಳು, ನನ್ನ ಸ್ಥಿತಿಯಲ್ಲಿ ನೀನೇ ಇದ್ದಿದ್ದರೆ ಏನು ಮಾಡುತ್ತಿದ್ದೆ?

### ಸುಲೇಮಾನ್

ಚಿತ್ತ, ಪ್ರಭು—ಕ್ಷಮಿಸಬೇಕು. ಇನ್ನು ಪ್ರಶ್ನೆಮಾಡುವುದಿಲ್ಲ. ದೈವನಿಯಮವಿದ್ದಂತಾಗಲಿ.

### ಸೊಹ್ರಾಬ್

ನಾಳೆ ರಾಜರಲ್ಲಿಗೆ ಹೋಗುವೆನು. ಅವರ ಸೇವೆಯಲ್ಲಿ ಶ್ರಮಿಸುವೆನು. ಅವರ ಸೈನ್ಯದಲ್ಲಿ ಯುದ್ಧಮಾಡುವೆನು. ಅವರ ಮೂಲಕ, ಯುದ್ಧದ ಮೂಲಕ ತಂದೆಯವರನ್ನು ಕಾಣುವ ಪ್ರಯತ್ನಮಾಡಿ ನೋಡುವೆನು. ಅಲ್ಲಿಗೂ ಸಾಧ್ಯವಿಲ್ಲವಾದರೆ ಕಂಡೇ ಇದೆ!

### ಸುಲೇಮಾನ್

ಚಿತ್ತ.

### ಸೊಹ್ರಾಬ್

ಪ್ರಯತ್ನವು ನಮಗೆ ಸೇರಿದುದು; ಉಳಿದುದು ನಮಗೆ ಸೇರಿದುದಲ್ಲ. ನಾಳೆ ಬೆಳಿಗ್ಗೆಯ ಹೊತ್ತಿಗೆ ನೀನೂ ಸಿದ್ಧವಾಗಿರು. ಈಗ ವಿಚಾರಿಸಿಕೊಂಡು ಬಾ ಹೋಗು ಬೆಳಿಗ್ಗೆ ರಾಜರು ಎಲ್ಲಿ ದರ್ಬಾರು ಮಾಡುವರೆಂದು. **(ಸುಲೇಮಾನನು ಹೋಗುವನು.)**

**(ಸೊಹ್ರಾಬನು ನಿಟ್ಟುಸಿರುಬಿಟ್ಟು ಈಚೆಕಡೆ ಹೋಗುವನು.)**

**ತೆರೆ.**

---

## ದೃಶ್ಯ ೪

**ಸಾಮರ್ಕಂಡ್. ಅರಮನೆಯ ಹೂದೋಟ. ಅಫ್ರಾಸಿಯಾಬನು ಸೊಹ್ರಾಬನ ಹೆಗಲಮೇಲೆ ಕೈಹಾಕಿಕೊಂಡಿದ್ದಾನೆ. ಇಬ್ಬರೂ ನಡೆದು ಹೋಗುತ್ತಿದ್ದಾರೆ.**

**ಅಫ್ರಾಸಿಯಾಬ್**

ನೀನು ವಿಚಿತ್ರದ ಹುಡುಗ, ಸೊಹ್ರಾಬ್ !

**ಸೊಹ್ರಾಬ್**

ನಿಮಗೆ ಹಾಗೆ ಕಾಣಿಸುತ್ತಿರಬಹುದು.

**ಅಫ್ರಾಸಿಯಾಬ್**

ನೀನು ಬಂದ ಒಂದು ತಿಂಗಳು ಕಾಲದಲ್ಲಿ ನನ್ನ ಪ್ರಾಣದಂತಾಗಿರುವೆ. ನಿನ್ನನ್ನು ಒಂದು ಘಳಿಗೆ ಬಿಟ್ಟಿರಲು ಮನಸ್ಸು ಒಡಂಬಡದು. ಇಲ್ಲಿಷ್ಟು ಸುಖಗಳಿವೆ, ಪದವಿಯಿದೆ, ಸರ್ವಾಧಿಕಾರವಿದೆ; ನನ್ನ ಜೊತೆಯಲ್ಲಿದ್ದುಕೊಂಡಿರಲೊಲ್ಲೆಯೇಕೆ?

**ಸೊಹ್ರಾಬ್**

ಕಾರಣವನ್ನು ಹಿಂದೆಯೇ ಹೇಳಿದ್ದೇನೆ;—ನನಗೆ ಸುಖ ಬೇಕಿಲ್ಲ. ತಮ್ಮ ಸ್ನೇಹಿತನಿಂದ ತಾವು ಯುದ್ಧರಂಗದಲ್ಲಿ ಸೇವೆ ತೆಗೆದುಕೊಳ್ಳಬೇಕು.

**ಅಫ್ರಾಸಿಯಾಬ್**

ತಿಳಿದೂ ತಿಳಿದೂ ಕಷ್ಟವನ್ನೇಕೆ ಹುಡುಕಿಕೊಂಡು ಹೋಗಬೇಕು? ಯುದ್ಧದಲ್ಲಿ ನನಗೆ ನೀನು ಅಮಿತವಾದ ಕೀರ್ತಿ ತರುವೆಯೆಂಬುದು ನಿಜ. ಆದರೆ ಅಲ್ಲಿನ ಸೇವೆಗಿಂತ ಇಲ್ಲಿನ ಸಹವಾಸವು ನನಗೆ ಹೆಚ್ಚು ಪ್ರಿಯವಾದುದು. ನನ್ನೊಡನಿರು. ಅದಾಗದಾದರೆ ನಿಮ್ಮ ತಾಯಿಯ ಬಳಿಗೆ ಹೋಗು.

**ಸೊಹ್ರಾಬ್**

ಎರಡೂ ಆಗತಕ್ಕದ್ದಲ್ಲ. ತಮ್ಮ ಮಾತಿನ ನಂಬಿಕೆಯಮೇಲೆ ನಾನು ಇಲ್ಲಿ ಈವರೆಗೂ ಇದ್ದೆ. ಈಗ ನನ್ನ ಕಾರ್ಯಗಳಿಗೆ ಅಡ್ಡಿ

ತರುವ ಯತ್ನವಮಾಡಿದರೆ ನಾನು ಈ ಕ್ಷಣವೇ ಇಲ್ಲಿಂದ ಹೊರಡ ಬೇಕಾಗುವುದು. ಒಬ್ಬನೇ ಏನೇನನ್ನು ಮಾಡಬಹುದೋ ಅದನ್ನು ಪುನಃ ಮಾಡಿ ನೋಡುತ್ತೇನೆ.

ಅಫ್ರಾಸಿಯಾಬ್

ನನ್ನಲ್ಲಿ ನಿನಗೆ ಸ್ವಲ್ಪವೂ ಪ್ರೀತಿಯಿಲ್ಲ, ಸೊಹ್ರಾಬ್. ಇಷ್ಟು ಅಲ್ಪಕಾಲದಲ್ಲಿ ಇಷ್ಟು ಪ್ರೀತಿ ನನಗೆ ಹಿಂದಾವಾಗಲೂ, ಆರ ವಿಷಯದಲ್ಲಿಯೂ ತೋರಿಲ್ಲ. ಎಲ್ಲೆಲ್ಲಿಗೂ ಬೇಹುಗಾರರನ್ನಟ್ಟಿ ದ್ದೇನೆ. ಅವರು ಸಮಾಚಾರವನ್ನು ತರುವವರೆಗೂ ಸ್ವಲ್ಪ ತಾಳು.

ಸೊಹ್ರಾಬ್

ಆವೊಳಗೆ ನನ್ನ ಮೂರುತಿಂಗಳ ಗಡುವು ಮೀರಿ ನಮ್ಮ ತಾಯಿಯು ಪ್ರಾಣಬಿಡುತ್ತಾಳೆ. ಆಮೇಲೆ ಯಾರಿಗೋಸ್ಕರ ಸುಖ? ಯಾರಿಗೋಸ್ಕರ ಜೀವನ? ಯಾರಿಗೋಸ್ಕರ ಸಂತೋಷ?

ಅಫ್ರಾಸಿಯಾಬ್

ನೀನಷ್ಟು ಹಟಮಾಡಿದರೆ ನಾನು ಹೇಳುವುದೇನಿದೆ? ಇದೊ, ನಿನ್ನಿಷ್ಟದಂತೆ ಸೈನ್ಯದವರೊಡನೆ ಹೋಗು. ನಿನ್ನನ್ನು ಪ್ರೀತಿಸು ತ್ತಿರುವ ನಮ್ಮನ್ನೆಲ್ಲ ಹಿಂದುಳಿಸಿ ಹೋಗು. ನಮ್ಮಾಸೆ ಹಿತಾ ಕಾಂಕ್ಷೆಗಳನ್ನು ಭಂಗಪಡಿಸುವುದಕ್ಕೇ ನೀನು ನಿಶ್ಚಯಮಾಡಿರು ವಾಗ ನಾವಿನ್ನೇನು ಮಾಡಬಲ್ಲೆವು?—ನಿನ್ನ ಮನಸ್ಸು ಕಲ್ಲು.

ಸೊಹ್ರಾಬ್

ಅಲ್ಲವೆಂದು ನಿಮಗೆ ಗೊತ್ತು. ತಾವು ತೋರಿರುವ ಪ್ರೇಮ ವಿಶ್ವಾಸಗಳು ಸಾಮಾನ್ಯವಾದುವೆ? ನಾನು ಎಷ್ಟು ಕೃತಜ್ಞ ನಾಗಿದ್ದರೆ ತಾನೇ ಅವನ್ನು ತೀರಿಸಿಯೇನು? ಆದರೂ ಮಾಡುವು ದೇನು? ಈಗ ನನ್ನ ಸ್ಥಿತಿ ಹಾಗಿದೆ. ಬೇರಾವ ಭಾವನೆಗೂ, ವೃತ್ತಿಗೂ — ಕೊನೆಗೆ ಉಪಕಾರಸ್ಮರಣೆಗೂ — ಸಮಯವಿಲ್ಲ ಹಜೂರ್; ಅವಕಾಶವಿಲ್ಲ. ಅವರನ್ನು ಕಾಣಬೇಕು, ಇಲ್ಲವೆ ಯುದ್ಧದಲ್ಲಿ ಮಡಿಯಬೇಕು.

ಅಫ್ರಾಸಿಯಾಬ್

ಮಡಿದುದರಿಂದ ಏನು ಫಲ? ನಿಮ್ಮ ತಂದೆಯುವರನ್ನು ಸೇರಿದ ಹಾಗಾಯಿತೆ? ನಿಮ್ಮ ತಾಯಿಯ ಮನಸ್ಸನ್ನು ಸಂತೋಷ ಪಡಿಸಿದಹಾಗಾಯಿತೆ?

ಸೊಹ್ರಾಬ್

ನನ್ನ ಕರ್ತವ್ಯವನ್ನು ಮಾಡಿದಹಾಗಾದರೂ ಆಯಿತು.

ಅಫ್ರಾಸಿಯಾಬ್

ನಿನಗಾರು ಹೇಳುವವರು? ನಿನ್ನ ಎದೆಯೂ ಮನಸ್ಸೂ ಏಕಮುಖವಾಗಿವೆ. ನಿನ್ನ ದೃಷ್ಟಿಯು ಒಂದೇಕಡೆ ಚಲಿಸದೆ, ಬೇರೊಂದನ್ನು ನೋಡದೆ ಇದೆ. ಹೋಗಿಬಾ—ಮರೆಯದಿರು ನಿನ್ನ ಸುಖಸಂತೋಷಗಳು ನಮ್ಮವೆಂದು; ನಿನ್ನ ಅಸುಖದಿಂದ ನಮಗೆ ಅಸುಖವೆಂದು.

ಸೊಹ್ರಾಬ್

ಪರಮಾನುಗ್ರಹ—ಅಪ್ಪಣೆಕೊಡಬೇಕು.

ಅಫ್ರಾಸಿಯಾಬ್

ಮತ್ತಿನ್ನೇನು ಹೇಳಲಿ, ಸೊಹ್ರಾಬ್! ದೇವರು ನಿನಗೆ ಒಳ್ಳೆಯದನ್ನು ಮಾಡಲಿ. ನಿನ್ನ ಮನಸ್ಸಿಗೆ ಶಾಂತಿ ಸಮಾಧಾನ ಗಳು ಬೇಗ ಬರಲಿ, ನಿನ್ನಿಷ್ಟ ನೆರವೇರಲಿ. ಆದರೂ ಸೊಹ್ರಾಬ್—

ಸೊಹ್ರಾಬ್

ಏನು?

ಅಫ್ರಾಸಿಯಾಬ್

ನನ್ನ ಮನಸ್ಸು ನಿನ್ನನ್ನು ಸಮಾಧಾನದಿಂದ ಬೀಳ್ಕೊಳ್ಳುತ್ತಿಲ್ಲ.

ಸೊಹ್ರಾಬ್

ಬಡವನೊಬ್ಬನ ವಿಚಾರದಲ್ಲಿ ತಮಗೇಕಿಷ್ಟು ವ್ಯಥೆ?

**ಅಫ್ರಾಸಿಯಾಬ್**

ಆಪ್ತವಾದ ವಸ್ತುವಿಗೆ ಅಪಾಯ ತಟ್ಟೀತೆಂಬ ಶಂಕೆ ತೋರಿದರೆ ವ್ಯಥೆಯಲ್ಲವೆ?

**ಸೊಹ್ರಾಬ್**

ನೀವು ಯೋಚಿಸಬೇಡಿ. ನನ್ನ ಸ್ವರ್ಗದ ಕಡೆ ನಾನು ಪ್ರಯಾಣ ಮಾಡುತ್ತಿದೇನೆ. ನನ್ನ ದೇವರನ್ನರಸಿ ಹೋಗುತ್ತಿದೇನೆ. ನನಗೇನು ಭೀತಿ? ನಿಮಗೇಕೆ ಶಂಕೆ?....ದೇವರೇ, ಇಷ್ಟು ಜನರ ಪ್ರೀತಿಗೆ ನನ್ನನ್ನು ಯೋಗ್ಯನನ್ನಾಗಿ ಮಾಡು.

**ಅಫ್ರಾಸಿಯಾಬ್**

ಕೃತಾರ್ಥನಾಗು, ಸೊಹ್ರಾಬ್--ಹೋಗಿಬಾ. (**ಮೆಲ್ಲನೆ ಬೀಳ್ಕೊಂಡು ಹೊರಡುವನು.**)

**ಈಚೆಕಡೆಯಿಂದ ಚಾರನೊಬ್ಬನನ್ನು ಹಿಂದಿರಿಸಿಕೊಂಡು ಸುಲೇಮಾನನ ಪ್ರವೇಶ.**

**ಸುಲೇಮಾನ್**

ಅಡರ್‌ಬೈಜಾನಿನಿಂದ ನಿಮಗೆ ವರ್ತಮಾನ ಬಂದಿದೆ.

**ಸೊಹ್ರಾಬ್**

ತಂದಿರುವವರು ಯಾರು?

**ಚಾರ**

(**ನೆಲಮುಟ್ಟಿ ಸಲಾಮುಮಾಡಿ**) ನಾನು, ಪಾದದ ಗುಲಾಮ (**ಕಾಗದವನ್ನು ಕೊಡುವನು**).

**ಸೊಹ್ರಾಬ್**

(**ಕಾಗದವನ್ನು ಓದಿಕೊಂಡು ಹಾಗೇ ಮೆಲ್ಲಮೆಲ್ಲಗೆ, ಅರೆಗಟ್ಟಿಯಾಗಿ** "ಎರಡು ತಿಂಗಳು ಕಾಲ ಆಗಿಹೋಯಿತು."‥ ನಿಜ ಅಮ್ಮ, ಆದರೆ ಮಾಡಿದ ಪ್ರತಿಜ್ಞೆಯು ನೆರವೇರಬೇಕು. ಇನ್ನೂ ಒಂದು ತಿಂಗಳ ಕಾಲ ಉಳಿದಿದೆ. ಅಷ್ಟರ ಅವಧಿಯಲ್ಲಿ ಬೇರೇ ಪ್ರಪಂಚವನ್ನೇ ಸೃಷ್ಟಿಸಬಹುದಲ್ಲವೆ? ನಿಮ್ಮ ಕೊರಗನ್ನು ಬೇರೆ ಹೇಗೆ ನಿವಾರಿಸಬಲ್ಲೆ?....

"ನನ್ನ ಬಾಳಿಗೆ ಕತ್ತಲು ಕವಿಯಿಸಬೇಡ ಕಂದ, ಹೊರಟು ಬಾ. ಒಂದು ನಿಮಿಷವನ್ನು ಕಳೆಯುವುದು ಒಂದು ಯುಗವಾಗಿ ಕಾಣುತ್ತಿದೆ."·· ತಾಯೇ ನನಗೋ? ಮೊದಲೇ ತಿಳಿಸದಾದಿರೇ! ವಿಷಯವನ್ನು ಮರೆಮಾಚಿದಿರೇ! ಚಿಂತೆಯಿಲ್ಲ. ಆದುದಾಗಿ ಹೋಯಿತು. ನಾನು ರುಸ್ತುಮರ ಮಗನು. ನಿಮ್ಮ ಆಶೀರ್ವಾದ ಬಲವಿರುವಾಗ, ಇಷ್ಟು ತೀವ್ರವಾದ ಆಶೆ ಪ್ರೀತಿಗಳು ನನಗಿರುವಾಗ, ನಾನು ತಂದೆಯವರನ್ನು ಕಾಣದೆ ಹೋದೇನೆ? ಭಯವೇನು ಬಂತು?

"ಅವರು ಬಡವಳ ಕೈಬಿಟ್ಟರು. ನೀನಾದರೂ ಹತ್ತಿರವಿರುವೆಯೆಂದು ನಂಬಿ—ಅಯ್ಯೋ ಮರುಳಾಸೆಯೆ!—ಅವರಿಗೆ ದ್ರೋಹವಾಚರಿಸಿದೆ. ಈಗ ನೀನೂ ಕಣ್ಮರೆಯಾಗಿರುವೆ, ಸೊಹ್ರಾಬ್."·· ಎರಡು ದಿನ ತಾಳಿಕೊಂಡಿರಿ, ತಾಯಿ, ಖಂಡಿತವಾಗಿ ಅವರನ್ನು ಕರೆತರುತ್ತೇನೆ, ನಿಮ್ಮ ಪಾದಸೇವೆ ಮಾಡುತ್ತೇನೆ. ಅವರ ಕ್ಷಮಾಪಣೆಯನ್ನು ಪಡೆದು, ನೀವಿಬ್ಬರೂ ಸೇರಿ ಸುಖವಾಗಿರುವುದನ್ನು ಕಣ್ಣುತುಂಬ ನೋಡಿ ಪುನಃ ನಿಮ್ಮ ಪುಣ್ಯಗರ್ಭದಲ್ಲಿ ಹುಟ್ಟಿದಂತೆ ಸುಖಿಸುತ್ತೇನೆ. ಎಂಟು ವಾರಗಳೇ ಕಳೆದುವಂತೆ....(ಚಾರನನ್ನು ಕುರಿತು) ನಾನಿಲ್ಲಿರುವುದು ಅವರಿಗೆ ಹೇಗೆ ತಿಳಿಯಿತು?

**ಚಾರ**

ಜನರ ಬಾಯಲ್ಲಿನ ಮಾತು.

**ಸೊಹ್ರಾಬ್**

ಅಮ್ಮನವರನ್ನು ನೀನು ಕಂಡಾಗ ಅವರು ಹೇಗಿದ್ದರು?

**ಚಾರ**

ನೀವು ಹೋದಾರಭ್ಯ ಅವರು ಊಟ ಉಪಚಾರಗಳನ್ನು ಒಲ್ಲರು. ಯಾರ ಸಮಾಧಾನವನ್ನೂ ಕೇಳರು. ನಿಮ್ಮನ್ನು ಹಿಂಬಾಲಿಸಿ ತಾವೇ ಹೊರಡುವೆವೆಂದು ಮೂರ್ಖಮಾಡಿದರು.

ಸುಲ್ತಾನರು ಬಹುವಾಗಿ ಸಂತೈಸಿ ಈ ಸಮಾಚಾರಕ್ಕೆ ಉತ್ತರ ತರಲೆಂದು ನನ್ನನ್ನು ಕಳುಹಿಸಿದರು, ಸ್ವಾಮಿ. ಅವರು ಬಲು ಬಡವಾಗಿ ಹೋಗಿದ್ದಾರೆ.

### ಸೊಹ್ರಾಬ್

ಸರಿ. ಇನ್ನೇನು ಹೇಳಿದರು ?

### ಚಾರ

ಕಂಡತಕ್ಷಣ ಕರೆದುಕೊಂಡು ಬಾ ಎಂದರು. ಎಂದವರು ಒಡನೆಯೇ, ಬೇಡ ಅವನು ಬರುವುದಿಲ್ಲ, ಅವನು ಹೇಗಿದ್ದಾನೆ, ಸುಖವಾಗಿದ್ದಾನೆಯೇ ಇಲ್ಲವೆ, ಕಾರ್ಯವು ಎಷ್ಟರವರೆಗೆ ನೆರ ವೇರಿದೆ ವಿಚಾರಿಸಿಕೊಂಡು ತಮ್ಮ ಜ್ಞಾಪಕವನ್ನು ಕೊಟ್ಟು ಬಾರೆಂದು ಅಪ್ಪಣೆಕೊಡಿಸಿದರು.

### ಸೊಹ್ರಾಬ್

ಇರಲಿ ಹೋಗು. (ಕೈಬೆರಳಿಂದ ಉಂಗುರವನ್ನು ತೆಗೆದು) ಈ ಉಂಗುರವನ್ನು ತೆಗೆದುಕೊಂಡುಹೋಗಿ ಅವರಿಗೆ ನನ್ನ ನಮ ಸ್ಕಾರಗಳೊಡನೆ ಕೊಡು....ಬೇಡ ನಿಲ್ಲು....ಸುಲೇಮಾನರೂ ನಿನ್ನೊಡನೆ ಬರುವರು.....ಇರುಳೂ ಹಗಲೂ ನನಗೂ ಅವರ ಧ್ಯಾನವೇ ಇದೆಯೆಂದೂ, ಬೇಸಗೆ ಆರಂಭವಾಗುವುದರೊಳಗಾಗಿ ನಾನಲ್ಲಿಗೆ ಹಿಂದಿರುಗಿ ಬರುವೆನೆಂದೂ ಹೇಳು. ಬಾಕಿ ವಿಚಾರ ಗಳನ್ನು ಸುಲೇಮಾನರು ತಿಳಿಸುವರು.

### ಸುಲೇಮಾನ್

ಇದೇನು ಸೊಹ್ರಾಬ್‌ಜೀ ? ನನ್ನನ್ನು ನಿಮ್ಮ ಬಳಿಯಲ್ಲಿ ಇರಗೊಡಿಸಕೂಡದೆಂದು ಈ ಹೂಟ ಹೂಡಿದಿರಾ? ನಾನು ಹೋಗುವುದಿಲ್ಲ.

### ಸೊಹ್ರಾಬ್

ಸುಲೇಮಾನ್, ನನ್ನ ಮಾತನ್ನು ಪೂರ್ತಿ ಕೇಳು. ತಾಯಿ ಯವರನ್ನು ಸಂತೈಸುವುದಕ್ಕೆ ಬೇರೆ ಯಾರಿಂದಲೂ ಸಾಧ್ಯವಿಲ್ಲ.

ಇನ್ನೊಂದು ತಿಂಗಳು ಮಾತ್ರ ಆಕೆಯ ಹತ್ತಿರವಿದ್ದುಕೊಂಡಿದ್ದು ನನಗಾಗಿ ಆಕೆಗೆ ಧೈರ್ಯ ಹೇಳುತ್ತಿರು. ಅದೃಷ್ಟವಿದ್ದರೆ—ಆ ಶುಭಯೋಗವಿದ್ದರೆ—ಅಷ್ಟರೊಳಗಾಗಿ ತಂದೆಯವರೊಡನೆ ಊರಿಗೆ ಬರುವೆನು. ಎಲ್ಲವೂ ಸರಿಯಾಗುವುದು. ಸುಖದಿಂದ ಕೊನೆಗೊಳ್ಳುವುದೆಲ್ಲವೂ ಒಳ್ಳೆಯದೇ. ಇಲ್ಲವಾದರೆ..ಇನ್ನೇನು ಹೇಳಲಿ?—ಕೊನೆಯ ಬಾರಿ ನನಗೆ ಉಪಕಾರ ಮಾಡಿದಂತಾಗುವುದು. ಆಕೆಯ ಶುಶ್ರೂಷೆಯನ್ನು ನಿನಗೊಪ್ಪಿಸಿ ಹೋಗುವೆನು. ದಯವಿಟ್ಟು ಇಷ್ಟು ಮಾಡು ಹೋಗು.

**(ಸುಲೇಮಾನನು ಕಷ್ಟದಿಂದ ಬೀಳ್ಕೊಂಡು ಹೋಗುವನು. ಚಾರನೂ ಹೋಗುವನು.)**

**ಅಫ್ರಾಸಿಯಾಬನ ಪುನಃ ಪ್ರವೇಶ**

**ಅಫ್ರಾಸಿಯಾಬ್**

ಮರೆತುಬಿಟ್ಟಿದ್ದೆ ಸೊಹ್ರಾಬ್. ಪೆರಾನ್‌ವೈಸಾಯವರಿಗೆ ಸೂಕ್ಷ್ಮವಾಗಿ ಎಲ್ಲವನ್ನೂ ತಿಳಿಸಿದ್ದೇನೆ. ಅವರನ್ನು ಕೇಳದೆ ನೀನು ಯಾವುದನ್ನೂ ಮಾಡಬೇಡ. ಅನುಭವದಲ್ಲಿಯೂ ವಯಸ್ಸಿನಲ್ಲಿಯೂ ಅವರು ಹಿರಿಯರು. ನಮ್ಮ ಹಿತಾಕಾಂಕ್ಷಿಗಳು. ಆತನು ಹೇಳುವುದನ್ನು ತಂದೆಯ ಮಾತಿನಂತೆ ಲಾಲಿಸು. ನಿನಗೆ ಮಂಗಳವಾಲಿ!

**ತೆರೆ.**

---

## ದೃಶ್ಯ ೫

**ಯುದ್ಧರಂಗದಲ್ಲಿ ತುರಾನೀ ಪಾಳೆಯ. ಪೆರಾನ್‌ವೈಸಾ ಯವರ ಡೇರೆ. ಒಳಗೆ ಪೆರಾನ್‌ವೈಸಾ ಮಲಗಿದ್ದಾರೆ. ಸೊಹ್ರಾಬ್ ಹೊರಗಿನಿಂದ ಬಂದು ಮೆಲ್ಲಗೆ ಒಳಕ್ಕೆ ಹೋಗಲು ಯತ್ನಿಸುತ್ತಿರು ವನು. ಎಚ್ಚತ್ತ ಪೆರಾನ್‌ವೈಸಾ ಈಚೆ ಕಡೆಗೆ ಹೊರಳಿ,**

**ಪೆರಾನ್‌ವೈಸಾ**

ಯಾರದು ?

**ಸೊಹ್ರಾಬ್**

ನಾನು.

**ಪೆರಾನ್‌ವೈಸಾ**

ನಾನೆಂದರೆ ?

**ಸೊಹ್ರಾಬ್**

ನಾನು ಸೊಹ್ರಾಬ್.

**ಪೆರಾನ್‌ವೈಸಾ**

ಇದೇನು ಸೊಹ್ರಾಬ್, ಇಷ್ಟುಹೊತ್ತಿನಲ್ಲಿ? ಆಗಲೆ ಬೆಳಗಾಗಿ ಹೋಯಿತೆ? ನಾನು ಕಡೆಯ ಜಾವವೇ ಕಳೆದಿಲ್ಲವೆಂದು ಕೊಂಡಿದ್ದೆ.

**ಸೊಹ್ರಾಬ್**

ನೀವು ಹೇಳುವುದು ನಿಜ. ಬೆಳಗಾಗುವುದಕ್ಕೆ ಇನ್ನೂ ಹೊತ್ತಿದೆ.

**ಪೆರಾನ್‌ವೈಸಾ**

ಹಾಗಾದರೆ ಶತ್ರುಗಳು ಸಿದ್ಧರಾಗಿದ್ದಾರೆಯೊ? ಅಥವಾ ನಮ್ಮನ್ನು ಮುತ್ತುವ ಪ್ರಯತ್ನ ನಡೆಯುತ್ತಿದೆಯೊ ?

**ಸೊಹ್ರಾಬ್**

ಎರಡೂ ಇಲ್ಲ. ಎಲ್ಲರೂ ಸುಖವಾಗಿ ನಿದ್ರಿಸುತ್ತಿದ್ದಾರೆ. ನನಗೆ ಮಾತ್ರ ನಿದ್ರೆ ಬರಲಿಲ್ಲ. ರಾತ್ರಿಯೆಲ್ಲಾ ಕಣ್ಣುರೆಪ್ಪೆ ಹೊಡೆಯುವುದಕ್ಕೂ ಆಗಲಿಲ್ಲ. ತಮ್ಮಲ್ಲಿ ಆಲೋಚನೆಗೆ ಬಂದೆ.

ಪೆರಾನ್‌ವೈಸಾ

ಅಂಥ ಆಲೋಚನೆಯೇನು, ಈ ಹೊತ್ತಿನಲ್ಲಿ? ಬೆಳಗಾದ ಮೇಲೆ ಮಾಡುವುದಕ್ಕೆ ಆಗುತ್ತಿರಲಿಲ್ಲವೆ? ಕುಳಿತುಕೊ ಬಾ ಸೊಹ್ರಾಬ್, ನಿಂತೇ ಇರುವೆಯಲ್ಲ; ನಿನ್ನ ಹುಚ್ಚು ಹೋಗಿಲ್ಲ ವೆಂದು ಕಾಣುವುದು?

ಸೊಹ್ರಾಬ್

ಹೇಗೆ ಹೋದೀತು ಜನಾಬ್? ನಿಮಿಷ ನಿಮಿಷವೂ ಹೆಚ್ಚುತ್ತಿದೆ.

ಪೆರಾನ್‌ವೈಸಾ

ಈಗ ಏನುಮಾಡಬೇಕೆಂದಿರುವೆ? ನನ್ನಿಂದ ನಿನಗೆ ಯಾವ ಸಹಾಯವಾಗಬೇಕು?

ಸೊಹ್ರಾಬ್

ನವಾಬರು ಹೇಳಿದ್ದಾರೆ, ಯಾವುದನ್ನೂ ತಮ್ಮನ್ನು ಕೇಳಿಯೇ ಮಾಡಬೇಕೆಂದು. ತಂದೆಯವರಂತೆ ತಮ್ಮ ಮಾತನ್ನು ಲಾಲಿಸಬೇಕೆಂದು.

ಪೆರಾನ್‌ವೈಸಾ

ನನ್ನ ಪ್ರೀತಿಯ ವಿಚಾರದಲ್ಲಿ ನಿನಗೆ ಸಂದೇಹವೆ ಸೊಹ್ರಾಬ್? ನಿನ್ನ ಮನಸ್ಸಿನಲ್ಲಿರುವುದೇನು, ಬಾಯಿ ಬಿಟ್ಟು ಹೇಳು.

ಸೊಹ್ರಾಬ್

ನಿಮಗೆ ಗೊತ್ತಿದೆ:—ನಿಮ್ಮ ಸೈನ್ಯದಲ್ಲಿ ನಾನು ಸೇರಿ ಕೊಂಡಂದಿನಿಂದ—ರಣಪ್ರಯಾಣದ ಸಮಯದಿಂದ ಹಿಡಿದು ಈ ವರೆಗೂ ನಾನು ಯಾವ ರೀತಿ ಯುದ್ಧಮಾಡಿ ನಿಮ್ಮ ಧ್ವಜಕ್ಕೆ ಕೀರ್ತಿಯನ್ನೂ ಜಯವನ್ನೂ ತಂದಿರುವೆನೆಂಬುದು. ವಯಸ್ಸಿನಲ್ಲಿ ಹುಡುಗನಾದರೂ, ವಯಸ್ಕನಾದ ಯೋಧನಂತೆ ಹೇಗೆ ಕಾದಿ, ಯುದ್ಧವಾದಮೇಲೆ ಯುದ್ಧದಲ್ಲಿ ಇರಾನಿಯವರನ್ನು ಸೋಲಿಸಿ

ನಿಮಗೆ ಜಯವನ್ನೂ ಅವರಿಗೆ ಭೀತಿಯನ್ನೂ ಹೇಗೆ ಉಂಟು ಮಾಡಿರುವೆನೆಂಬುದು.

### ಪೆರಾನ್‌ವೈಸಾ

ಈ ಒಕ್ಕಣೆಯನ್ನೆಲ್ಲ ನನಗೇಕೆ ಹೇಳಬೇಕು, ನಾನರಿಯೆನೆ? ವಿಷಯವೇನು?

### ಸೊಹ್ರಾಬ್

ಈ ಸೈನ್ಯಕ್ಕೆ ನಾನೇಕೆ ಸೇರಿಕೊಂಡೆನೆಂಬುದರ ರಹಸ್ಯವನ್ನು ಖಾವಂದಿರು ತಮಗೆ ಹೇಳಿರುವೆನೆಂದು ನನಗೆ ಹೇಳಿದ್ದರು.

### ಪೆರಾನ್‌ವೈಸಾ

ಹುಂ.

### ಸೊಹ್ರಾಬ್

ನಾನಿಷ್ಟು ಮಾಡುತ್ತಿರುವುದೂ ನನ್ನ ತಂದೆ ರುಸ್ತುಮರನ್ನು ಕಾಣುವುದಕ್ಕಾಗಿ. ಅವರನ್ನು ಕಂಡು ಮೂರು ತಿಂಗಳೊಳಗಾಗಿ ಅವರನ್ನು ನಮ್ಮ ತಾಯಿಯ ಬಳಿ ಒಯ್ಯುವೆನೆಂದು ಭಾಷೆ ಕೊಟ್ಟು ಬಂದಿದ್ದೇನೆ.

### ಪೆರಾನ್‌ವೈಸಾ

ರುಸ್ತುಮರು ಸಿಕ್ಕಿಲ್ಲವಲ್ಲ.

### ಸೊಹ್ರಾಬ್

ಆದರೆ ಇನ್ನೊಂದು ವಾರದೊಳಗಾಗಿ ನನ್ನ ಅವಧಿ ಮುಗಿದು ಹೋಗುವುದು.

### ಪೆರಾನ್‌ವೈಸಾ

ಅಪ್ಪಾ, ರುಸ್ತುಮರು ಹಿಂದಿನಂತಲ್ಲ: ಹಿಂದೆ ಅವರಿಲ್ಲದ ಯುದ್ಧರಂಗವೇ ಇರುತ್ತಿರಲಿಲ್ಲ. ಅವರು ನಿಂತ ಯುದ್ಧದಲ್ಲಿ ಅವರೇ ಮೊದಲಿಗರು. ಆ ಕಾಲ ಹೋಯಿತು. ಈಗವರನ್ನು ಕಂಡೇ ಎಷ್ಟೋ ವರ್ಷಗಳಾದುವು. ಅವರಿಗೂ ಅವರ ರಾಜರಿಗೂ

ಯಾವ ಮನಸ್ತಾಪ ಬಂದಿದೆಯೊ, ಅನಿಷ್ಟವಾದ ಮುಪ್ಪು ತಮ್ಮ ಹತ್ತಿರಕ್ಕೂ ಬರುತ್ತಿರುವುದೆಂಬ ಶಂಕೆಯೊ, ಬೇರಾವ ಕಾರಣ ದಿಂದಲೊ ಅವರು ರಂಗಕ್ಕೆ ಬರುವುದನ್ನೇ ಬಿಟ್ಟಿರುವರು. ಈಗ ಅವರನ್ನು ಎಲ್ಲಿಂದು ಹುಡುಕುವೆ? ಅವರೇ ಶತ್ರುಗಳ ಕಡೆ ನಿಂತು ಯುದ್ಧಮಾಡುತ್ತಿದ್ದರೆ ನಮಗೆ ಜಯವೆಂದರೇನು?

### ಸೊಹ್ರಾಬ್

ಅದೆಲ್ಲಾ ಸರಿಯೆ. ನಾನು ರಾತ್ರಿಯೆಲ್ಲಾ ಯೋಚನೆಮಾಡಿ ಒಂದು ತೀರ್ಮಾನಕ್ಕೆ ಬಂದಿದ್ದೇನೆ.

### ಪೆರಾನ್‌ವೈಸಾ

ಎಂತಹ ತೀರ್ಮಾನ?

### ಸೊಹ್ರಾಬ್

ಈ ದಿನ ಸೈನ್ಯಗಳಿಗೆ ಸಂಕುಲಯುದ್ಧ ಬೇಡ. ತಾವು ಒಪ್ಪುವುದಾದರೆ, ದಯವಿಟ್ಟು ಅಷ್ಟು ಮಾತ್ರ ನಡೆಯಿಸಿಕೊಡುವಿರಾದರೆ, ನನ್ನ ಪರವಾಗಿ ಶತ್ರುಗಳಲ್ಲಿಗೆ ಹೋಗಿ ನಮ್ಮ—ತುರಾನಿಯವರ—ಪರವಾಗಿ ಒಂದು ಪ್ರಕಟನೆಯನ್ನು ಮಾಡಬೇಕು.

### ಪೆರಾನ್‌ವೈಸಾ

ಏನೆಂದು—ನೀನು ರುಸ್ತುಮರ ಮಗನೆಂದೊ? ನಿನಗೆ ಅವರ ಸಮಾಚಾರ ಬೇಕಾಗಿದೆಯೆಂದೊ?

### ಸೊಹ್ರಾಬ್

ಉಹುಂ—ಹಾಗಲ್ಲ—ಉಭಯ ಸೈನ್ಯಗಳೂ ಇಂದು ವಿಶ್ರಮಿಸಿಕೊಳ್ಳಲಿ. ಟಾರ್ಟರಿ ಪರವಾಗಿ ನಾನು ಇರಾನಿ ಯೋಧರಾರು ಬಂದರೂ ಅವರೆದುರಿಗೆ ನಿಂತು ದ್ವಂದ್ವಯುದ್ಧಕ್ಕೆ ಸಿದ್ಧನಾಗಿರುವೆನೆಂದೂ ಕಾಳೆಗಕ್ಕೆ ಅವರಲ್ಲಿನ ವೀರಶ್ರೇಷ್ಠರನ್ನು ಕೂಗಿ ಕರೆಯುತ್ತಿರುವೆನೆಂದೂ, ಯಾವ ಆಯುಧದಿಂದ ಬೇಕಾದರೂ ಕಾಳೆಗಮಾಡಲು ಸಿದ್ಧನಿರುವೆನೆಂದೂ, ಅವರ ಪರವಾಗಿ

ಎದೆಯಿರುವ ವೀರಾಳನ್ನು ಆರಿಸಿ ಅವರು ರಂಗಕ್ಕೆ ಕಳುಹಿಸಬಹುದೆಂದೂ, ನೆರೆದಿರುವ ಸೈನ್ಯಗಳೆದುರಿನಲ್ಲಿ ಇಂದೇ ಕಾಳಗವು ನಡೆಯುವುದೆಂದೂ ಪ್ರಕಟಿಸಬೇಕು.

### ಪೆರಾನ್‌ವೈಸಾ

ನಿನ್ನ ಹುಚ್ಚು ಮಿತಿಮೀರಿತು. ಇದೇನು ವಿಪರೀತ? ಇದರಿಂದ ನಿನಗೆ ಬರುವ ಲಾಭವೇನು?

### ಸೊಹ್ರಾಬ್

ಎಷ್ಟು ವಿಧದಲ್ಲಿ ಹುಡುಕಿದರೂ ತಂದೆಯವರು ಈವರೆಗೂ ಸಿಗಲಿಲ್ಲ. ಇಂದಿಲ್ಲದಿದ್ದರೆ ನಾಳೆ, ಈ ರಂಗದಲ್ಲಲ್ಲದಿದ್ದರೆ ಬೇರೊಂದರಲ್ಲಿ ಆ ಮಹಾಪುರುಷನನ್ನು ಕಾಣುವೆನೆಂದು ತಪಿಸುತ್ತಿದ್ದೇನೆ. ಹೀಗಾದರೂ ಆದೀತೇನೊ ಎಂಬ ಕುರುಡಾಸೆ.

### ಪೆರಾನ್‌ವೈಸಾ

ಕುರುಡಾಸೆಯೇ ಸರಿ. ನಾನು ಹೇಳಿದೆನಲ್ಲ ರುಸ್ತುಮರು ಪರ್ಷಿಯನ್ನರ ಕಡೆ ಈಗಿಲ್ಲವೆಂದು. ಅದನ್ನು ಮರೆತುಬಿಟ್ಟೆಯೇನು?

### ಸೊಹ್ರಾಬ್

ಇಲ್ಲ, ಮರೆಯಲಿಲ್ಲ.

### ಪೆರಾನ್‌ವೈಸಾ

ಹಾಗಾದರೆ ಅವರನ್ನು ಈ ರೀತಿ ಹೇಗೆ ಕಾಣಲಾದೀತು?

### ಸೊಹ್ರಾಬ್

ಅಖಂಡವಾದ ಸೈನ್ಯದಲ್ಲಿ ಸಾವಿರಾರು ಮಂದಿ ಸೇರಿ ಯುದ್ಧ ಮಾಡುವಾಗ ಎಷ್ಟೋ ಜನರು ಪ್ರತಾಪ ತೋರಿಸುವರು; ಕೀರ್ತಿ ಪಡೆಯುವರು; ಮಡಿಯುವರು. ಸೈನ್ಯಕ್ಕೆ ಜಯ ಲಭಿಸಿದರೆ ಆ ಜಯಕ್ಕೆ ಅನೇಕರು ಕಾರಣರು, ಭಾಗಿಗಳು. ಆ ಕೀರ್ತಿಯು

ಒಬ್ಬನಿಗೆ ಸೇರಿದುದಲ್ಲ. ಎಷ್ಟೋ ಜನರ ಹೆಸರು ಅಲ್ಲಿ ಅಳಸಿ ಹೋಗುವುದು. ಏಕಾಂಗ ಯುದ್ಧದಲ್ಲಿ ಹಾಗಲ್ಲ.

**ಪೆರಾನ್‌ವೈಸಾ**

ಈಗ ನಿನಗೆ ದೊರೆತಿರುವ ಕೀರ್ತಿ ಸಾಲದೆ? ನಮ್ಮ ಸೈನ್ಯಕ್ಕೆ ದೇವರಂತಿದ್ದೀಯೆ! ನಿನ್ನ ಹೆಸರನ್ನು ಕೇಳಿದ ಕೂಡಲೆ ಶತ್ರುಗಳು ಭೀತರಾಗಿ ನಿನ್ನ ಪೌರುಷದೆದುರಿಗೆ ನಿಲ್ಲಲಾರದೆ ಪಲಾಯನವಾಗುತ್ತಿದ್ದಾರೆ. ಇನ್ನೆಂಥ ಕೀರ್ತಿ ಬೇಕು ನಿನಗೆ? ರುಸ್ತುಮರಂಥ ಕೀರ್ತಿಯನ್ನು ಇಪ್ಪತ್ತು ದಿನಗಳಲ್ಲಿ ಸಂಪಾದಿಸಿರುವೆ!

**ಸೊಹ್ರಾಬ್**

ಹಾಗಲ್ಲ, ದಯವಿಟ್ಟು ಕೇಳಬೇಕು. ನನ್ನ ಕೀರ್ತಿಯಿಂದ ನನಗಷ್ಟು ಸಂತೋಷವಿಲ್ಲ. ಈಗ ಆಸೆಪಡುತ್ತಿರುವ ಕೀರ್ತಿಯಿಂದ ಪ್ರಯೋಜನವಾಗಬೇಕಾಗಿದೆ. ಇಂಥ ಕಾಳೆಗದಲ್ಲಿ ಈ ಈ ವೀರರಿಗೆ ಯುದ್ಧವಾಯಿತು, ಇಂಥವರಿಗೇ ಜಯವಾಯಿತು, ಇಂಥವರು ಮಡಿದರು ಎಂಬ ವಿಷಯವು ಸ್ಪಷ್ಟವಾಗುವುದು. ಅದರ ವಾರ್ತೆ ಕೀರ್ತಿಗಳು ಸ್ಪಷ್ಟವಾಗಿ ಎಂಟು ದಿಕ್ಕುಗಳಿಗೂ ಹರಡುವುವು. ಯಾವ ಅನಿಶ್ಚಯವೂ ಉಳಿಯದು.

**ಪೆರಾನ್‌ವೈಸಾ**

ಉಂ—ಆಮೇಲೆ?

**ಸೊಹ್ರಾಬ್**

ಈ ಕಾಳೆಗದಲ್ಲಿ ನನಗೇ ಜಯವಾದರೆ ಅದರ ಕೀರ್ತಿಯು ಜಗದ್ವಿಖ್ಯಾತವಾಗುವುದು. ನನ್ನ ಮುಂದೆ ಪರ್ಷಿಯಾದೇಶದ ಯೋಧನಾವನೂ ನಿಲ್ಲಲಾರದಾಯಿತೆಂದೂ, ಅವರೆಲ್ಲರ ಪೌರುಷಕ್ಕೂ ಹದಿನೈದು ವರ್ಷದ ಹುಡುಗನೊಬ್ಬನಿಂದ ಅಪಮಾನ ಪರಾಭವಗಳಾದುವೆಂದೂ ಖ್ಯಾತಿಯಾಗುವುದು.

**ಪೆರಾನ್‌ವೈಸಾ**

ಆಯಿತು—ಆಮೇಲೆ?

**ಸೊಹ್ರಾಬ್**

ಅಂಥ ಕೀರ್ತಿಯು ಇರಾನಿನ ಯೋಧಶ್ರೇಷ್ಠರಾದ ನನ್ನ ತಂದೆಯವರ ಕಿವಿಗೂ ಮುಟ್ಟುವುದು. ಅವರೂ ಊರಲ್ಲಿಲ್ಲವಂತೆ. ಇಲ್ಲಿಗೆ ಹತ್ತಿರದ ಪ್ರದೇಶಗಳಲ್ಲಿಯೇ ಏಕೆ ಇರಬಾರದು? ಇದ್ದರೆ ಜಾಗ್ರತೆಯಾಗಿಯೇ ತಿಳಿದೀತು. ತಿಳಿದರೆ ರಾಜರ ಮೇಲಿನ ಕ್ರೋಧ ಹೋಗಲಿ, ತಮ್ಮ ಜನತೆಗೇ ಆಗಿರುವ ಅಪಮಾನವನ್ನು ತೊಳೆಯುವ ಉದ್ದೇಶದಿಂದಲಾದರೂ ಕನಲಿ ಈ ಕಡೆ ಬಂದಾರು. ರುಸ್ತುಮರು ನಾನು ಚಿತ್ರಿಸಿಕೊಂಡಿರುವಂಥ ವೀರರೇ ಆಗಿರುವ ಪಕ್ಷದಲ್ಲಿ ಬಂದೇ ಬರುವರು. ಆಗ....

**ಪೆರಾನ್‌ವೈಸಾ**

ಅಯ್ಯೋ ಮಗುವೆ, ನಿನಗೇನು ಭ್ರಾಂತಿಯೋ ಇಷ್ಟು ಜನರು ನಿನ್ನಲ್ಲಿ ಪ್ರಾಣವಿಟ್ಟುಕೊಂಡಿರುವಾಗ, ಎಲ್ಲ ಸರದಾರರಲ್ಲಿಯೂ ಪೂಜ್ಯತೆಪಡೆದಿರುವ ನೀನು, ಯುದ್ಧದ ಜಯ ಪರಾಜಯಗಳಲ್ಲಿಯೂ, ಕೀರ್ತಿ ಅಶ್ರೇಯಸ್ಸುಗಳಲ್ಲಿಯೂ ಎಲ್ಲರೊಡನಿದ್ದು ಭಾಗಿಯಾಗುವುದನ್ನು ಬಿಟ್ಟು, ಪ್ರತಿಯೊಂದು ಸಲವೂ ಪ್ರಾಣಾಪಾಯಗಳನ್ನು ಲೆಕ್ಕಿಸದೆ ಒಬ್ಬನೇ ಮುಂದಕ್ಕೆ ನುಗ್ಗಿ ಹೀಗೇಕೆ ವ್ಯರ್ಥವಾಗಿ ಬಲಿಯಾಗಬೇಕೆನ್ನುವೆ? ಅದೃಷ್ಟವನ್ನು ಕೆಣಕಬಾರದು ಸೊಹ್ರಾಬ್. ನನ್ನ ಮಾತನ್ನು ಕೇಳು. ಯುದ್ಧದ ಮೂಲಕ, ಅಪಾಯಗಳ ಮೂಲಕ ತಂದೆಯನ್ನು ಹುಡುಕುವ ಯತ್ನವನ್ನು ಬಿಡು. ನಿನಗೆ ಬೇಕಾದ ಬೆಂಬಲವನ್ನೂ ಸಹಾಯಗಳನ್ನೂ ಒದಗಿಸುತ್ತೇನೆ. ಇಲ್ಲಿಂದ ಹೊರಟು ಶಾಂತಿಯಲ್ಲಿ ತಂದೆಯನ್ನು ಹುಡುಕು. ಸಮಾಧಾನ ಚಿತ್ತದಲ್ಲಿ ಹುಡುಕು ಹೋಗು. ನೀನು ನಮ್ಮ ಜೊತೆಯಲ್ಲಿಲ್ಲದಿದ್ದರೂ ಚಿಂತೆಯಿಲ್ಲ. ನಮ್ಮ ಪರವಾಗಿ ಯುದ್ಧ ಮಾಡದೆ ಇದ್ದರೂ—ನಮಗೆ ಮುಂದೆ ಆ ಕಾರಣದಿಂದ ಜಯ ದೊರೆಯದಿದ್ದರೂ ಚಿಂತೆಯಿಲ್ಲ. ನೀನು ಸುಖವಾಗಿದ್ದರೆ, ಸುಖವಾಗಿರುವೆಯೆಂದು ನಾವು ಕೇಳುತ್ತಿದ್ದರೆ ಸಾಕು. ಈ ಪ್ರಯತ್ನ ಬೇಡ.

### ಸೊಹ್ರಾಬ್

ನೀವು ಪೂಜ್ಯರು. ನನ್ನನ್ನು ತಡೆಯಬೇಡಿ. ಹೀಗೇ ಮಾಡೆಂದು ನನ್ನಾತ್ಮವು ಚೀರಿ ಕೂಗುತ್ತಿದೆ.

### ಪೆರಾನ್‌ವೈಸಾ

ಅಲ್ಲ ಸೊಹ್ರಾಬ್, ಸ್ವಲ್ಪ ಯೋಚನೆಮಾಡು. ಯುದ್ಧದಲ್ಲಿ ಗೆಲವು ಸೋಲುಗಳು ನಿಶ್ಚಯವಲ್ಲ.

### ಸೊಹ್ರಾಬ್

ನನಗೇ ಸೋಲೂ ಸಾವೂ ಬಂದಾವೆಂದು ನಿಮಗೆ ಶಂಕೆ ಯೇನು? ಆದರೆ ಆಗಲೇಳಿ. ಕುದಿಯುತ್ತ ತಳಮಳಗೊಳ್ಳುತ್ತ ಇರುವ ಈ ಅಶಾಂತ ಹೃದಯವು ಶಾಂತವಾಗುವುದು; ಗೆದ್ದರೆ ಕೀರ್ತಿ; ಅವಧಿ ತೀರುವುದರೊಳಗಾಗಿ ತಂದೆಯವರನ್ನು ಕಾಣುವ ಒಂದೇ ಒಂದು ಸಂಭವ. ಸೋತರೆ—ಸೋತು ಮಡಿದರೆ—(ಆತನ ಮುಖದತ್ತ ಕಣ್ಣೆತ್ತಿ ನೋಡುತ್ತ) ಸತ್ತವರು ಯಾವ ಸಂಬಂಧಿಗಳನ್ನು ಅಪೇಕ್ಷಿಸುವರು? ಯಾವ ತಂದೆಯನ್ನು ಹುಡುಕಿಕೊಂಡು ತಿರುಗಿಯಾರು!

### ಪೆರಾನ್‌ವೈಸಾ

ಬೇಡಪ್ಪ....ತಂದೆಯನ್ನು ಕಾಣಬೇಕಾದರೆ ಕ್ಷೇಮದಲ್ಲಿ ಕಾಣು. ಇಬ್ಬರೂ ಕ್ಷೇಮದಿಂದಿದ್ದರಲ್ಲವೇ ಸೇರುವಿಕೆಯ ಪ್ರಯೋಜನ? ವೃಥಾ ಏಕೆ ದುಡುಕುವೆ! ವಿಧಿಯನ್ನೇಕೆ ವೃಥಾ ಕೆರಳಿಸುವೆ? ಅಲ್ಲದೆ ಕೇಳು. ಹುಟ್ಟಿದಂದಿನಿಂದ ಹಿಡಿದು ಈವರೆಗೂ ನೀನು ನಿಮ್ಮ ತಂದೆಯವರನ್ನು ನೋಡಿಲ್ಲ. ಎದುರಿಗೇ ನಿಂತಿದ್ದರೂ ಅವರನ್ನು ಗುರುತಿಸಬಲ್ಲವನಲ್ಲ. ನೀನು ಮಗನೆಂದು ಅವರರಿಯರು. ಎರಡೂ ಕಡೆಯಲ್ಲಿ ಈ ಅಜ್ಞಾನವಿರುವಾಗ ದುಡುಕುವುದು ಅವಿವೇಕ. ನನಗೆ ಅರವತ್ತು ವರುಷಗಳ ಅನುಭವವಿದೆ. ನೀನು ಅರಿಯದ ಹುಡುಗ. ನನ್ನ ಮಾತನ್ನು ಲಾಲಿಸು. ತಂದೆ ಮಕ್ಕಳು ಸುಖದಲ್ಲಿ ಸೇರಬೇಕು.

## ಸೊಹ್ರಾಬ್

ಸೂಕ್ಷ್ಮಯೋಚನೆಗೆ ಈಗ ಕಾಲವಿಲ್ಲ. ಇಷ್ಟು ದಿನ ನಿಮ್ಮೆಲ್ಲರ ಸೇವೆಮಾಡಿರುವುದು ನಿಮಗೆ ಸಮರ್ಪಕವಾಗಿದ್ದರೆ, ಈ ಸಣ್ಣ ಪ್ರಾರ್ಥನೆಯನ್ನು ನೆರವೇರಿಸಿಕೊಡಿ. ನನ್ನಮೇಲೆ ನಿಮ್ಮೆಲ್ಲರಿಗೂ ಪ್ರೀತಿಯಿರುವುದು ನಿಜವಾದರೆ ಈ ಇಷ್ಟಕ್ಕೆ ತಡೆ ತರಬೇಡಿ.

## ಪೆರಾನ್‌ವೈಸಾ

ನಿನ್ನಿಷ್ಟ. ಇದರಮೇಲೆ ಹೇಳುವುದೇನಿದೆ? ಬೇಟೆಗೆ ಬಾಯೊಡ್ಡಿರುವ ಸಿಂಹದ ಮರಿಯನ್ನು ತಡೆಯಬಲ್ಲ ಶಕ್ತರು ಯಾರು? ರುಸ್ತುಮರ ಮಗನನ್ನು ಅಡ್ಡಿಯೊಡ್ಡಿ ನಿಲ್ಲಿಸಬಲ್ಲ ಧೀರನಾರು? ನಿನ್ನ ಹಣೆಯಲ್ಲಿ ಬರೆದುದಾಗಲಿ ಸೊಹ್ರಾಬ್ (ವ್ಯಸನದಿಂದ ಕೂಡಿದ ಪ್ರೀತಿಯಿಂದ ನೋಡುತ್ತ) ನನಗೇನೋ ಇದು ಸರ್ವಥಾ ಇಷ್ಟವಿಲ್ಲ. ಇದರಿಂದ ಮಂಗಳವಾಗಲಾರದೆಂಬ ಶಂಕೆ ತೋರುತ್ತಿದೆ. ನೋಡು—ಇದನ್ನೂ ಮೀರಿ ನೀನು ಹಟಮಾಡಿದರೆ ನಾನು ಬೇರೆ ಯೇನುಮಾಡಲಾದೀತು?

## ಸೊಹ್ರಾಬ್

ಅನುಗೃಹೀತನಾದೆ. (ಹೋಗುವನು.)

(ಯುದ್ಧಸಿದ್ಧತೆಯ ವಾದ್ಯಗಳು ಮೊಳಗುವುವು.)

(ಫಲಾಹಾರವಾದ ಕೂಡಲೆ ಪೆರಾನ್‌ವೈಸಾ ಶಾಂತಿಯ ಉಡುಪನ್ನು ಹಾಕಿಕೊಂಡು ಅಧಿಕಾರ ದಂಡವನ್ನು ಕೈಯಲ್ಲಿ ಹಿಡಿದು ಕಾಲಿಗೆ ಚಡಾವು ಮೆಟ್ಟಿಕೊಂಡು ರಂಗದಕಡೆ ಹೊರಡುವನು.)

ತೆರೆ.

---

# ದೃಶ್ಯ ೬

ಎರಡು ಕಡೆಯ ಸೈನ್ಯಗಳವರೂ ವಿಧ ವಿಧವಾಗಿ ಕವಾಯತ್ತು ಮಾಡುತ್ತ ವಾದ್ಯಗಳೊಡನೆ ರಣಘೋಷಗಳೊಡನೆ ಗೀತಿಕೆಗಳನ್ನು ಹೇಳಿಕೊಂಡು ರಂಗದೊಳಗೆ ಪ್ರವೇಶಮಾಡಿ ಪಡೆಗಳನ್ನು ಸೇರಿ ತಂತಮ್ಮ ಸ್ಥಾನಗಳಲ್ಲಿ ಹೋಗಿ ನಿಲ್ಲುವರು.

ಯುದ್ಧರಂಗ—ಪೆರಾನ್‌ವೈಸಾ ಶಾಂತಿದಂಡವನ್ನು ಮೇಲೆತ್ತಿ ಹಿಡಿದು ತೋರಿಸಿ ಇರಾನೀ ಸೇನಾಧಿಪತಿಯನ್ನು ಸಂಜ್ಞೆಮಾಡಿ ಕರೆಯುತ್ತಾನೆ. ಫೆರೂದ್ ಬಂದು, ಪರಸ್ಪರವಾಗಿ ಮರ್ಯಾದೆಗಳು ನಡೆಯುವುವು.

## ಪೆರಾನ್‌ವೈಸಾ

ಫೆರೂದ್, ಇರಾನಿ ತುರಾನಿ ಸರದಾರರೆ ಕೇಳಿ. ಈ ದಿನ ಉಭಯ ಸೈನ್ಯಗಳಿಗೂ ವಿಶ್ರಾಮವಿರಲಿ. ಆದರೆ ನಮ್ಮ ಪರವಾಗಿ ಸರದಾರ್ ಸೊಹ್ರಾಬರು ಏಕಾಂಗಿಯಾಗಿ ನಿಂತು ಕಾಳಗ ಮಾಡಲು ಅಪೇಕ್ಷಿಸುತ್ತಾರೆ. ನಿಮ್ಮ ಪರವಾಗಿ ಯೋಧಶ್ರೇಷ್ಠರನ್ನು ಆರಿಸಿ ಅವರಮೇಲೆ ದ್ವಂದ್ವಯುದ್ಧಕ್ಕೆ ಒಪ್ಪಿಸಿ ಕಳುಹಿಸತಕ್ಕದ್ದು. ಇದಕ್ಕೆ ನಿಮ್ಮ ಉತ್ತರವನ್ನು ಆಲೋಚನೆ ಮಾಡಿ ನಮಗೆ ಈಗಲೇ ಕೊಡತಕ್ಕದ್ದು.

(ಫೆರೂದನ ಮುಖವು ಗಭೀರವಾಗುವುದು.)

## ಫೆರೂದ್

(ಆತನು ದರ್ಪದಿಂದ ತಲೆಬಾಗಿ,) ಎರಡು ನಿಮಿಷಗಳ ಅವಕಾಶವನ್ನು ಕೊಡೋಣವಾದರೆ ಅಗತ್ಯವಾಗಿ ನಮ್ಮ ಇಷ್ಟವನ್ನು ತಿಳಿಸುವೆವು. (ತನ್ನ ದಳಪತಿಗಳತ್ತ ಹೊರಡುವನು).

(ಉಭಯ ಪಾರ್ಶ್ವಗಳಲ್ಲಿಯೂ ಗಜಬಿಜಿ.)

ಇರಾನೀ ಸೈನಿಕರು :—

## ಒಂದನೆಯವನು

ಏನು? ಸೊಹ್ರಾಬರೊಡನೆ ಕಾಳಗವೆ?

ಎರಡನೆಯವನು

ನಮ್ಮಲ್ಲಿ ಅಂಥಾ ಯೋಧರಾರಿದ್ದಾರೆ?

ಮೂರನೆಯವನು

ಆತನೆದುರಿಗೆ ನಮ್ಮವರಿಗೆ ಜಯವೆಲ್ಲಿಂದ ಬರಬೇಕು?

ಒಂದನೆಯವನು

ದೊಡ್ಡ ಅವಮಾನ ಬರುವಂತಾಯಿತೆ!

ನಾಲ್ಕನೆಯವನು

ನೋಡು ನೋಡು, ಫೆರೂದ್ ಗೋದರ್ಸ್ ಎಲ್ಲರೂ ತೀವ್ರವಾಗಿ ಚರ್ಚೆಮಾಡುತ್ತಿದ್ದಾರೆ.

ಎರಡನೆಯವನು

ಇನ್ನೇನು, ಯಾರನ್ನು ಕಳುಹಿಸುವುದೆಂದು?

ಮೂರನೆಯವನು

ಒಪ್ಪಿಕೊಂಡರೆ ಕಷ್ಟ—ಒಪ್ಪದಿದ್ದರೆ ನಾಚಿಕೆ ಕೇಡು.

ಒಂದನೆಯವನು

ಫೆರಬೂಸಿನ ಮುಖದ ಮೇಲೆ ನೋಡು ಚಿಂತೆ.

ಎರಡನೆಯವನು

ಗೋದರ್ಸ್ ಕೆಂಡ ಕೆಂಡವಾಗಿದ್ದಾನೆ.

ಮೂರನೆಯವನು

ಅವರ ಸವಾಲನ್ನು ಒಪ್ಪಲೇ ಬೇಕು. ಆದರೆ ನಮ್ಮ ಕಡೆ ವೀರರಾರಿದ್ದಾರೆ? ಬಹು ಕಷ್ಟಕ್ಕೆ ಬಂದಿತೇ?

ತುರಾನೀ ಸೈನಿಕರು:—

ಒಂದನೆಯವನು

ಸೊಹ್ರಾಬ್‌ಜೀಗೂ ಇರಾನೀ ವೀರರಿಗೂ ಕಾಳಗವೆ?

### ಎರಡನೆಯುವನು

ಇರಾನಿಗಳೇ ಹುಷಿಯಾರ್!

### ಮೂರನೆಯುವನು

ಇವರಮೇಲೆ ಕೈಯೆತ್ತಿ ನಿಲ್ಲಬಲ್ಲ ವೀರನಾರು?

### ಒಂದನೆಯುವನು

ಅವರ ಕಡೆ ಯುದ್ಧಮಾಡಬಲ್ಲವರು ರುಸ್ತುಮರೊಬ್ಬರು.

### ನಾಲ್ಕನೆಯುವನು

ಈಗ ರುಸ್ತುಮರನ್ನು ಎಲ್ಲಿಂದ ತರಬೇಕು?

### ಎರಡನೆಯುವನು

ರುಸ್ತುಮರು ಇನ್ನುಮೇಲೆ ಶತ್ರುಗಳ ಕಡೆ ಯುದ್ಧ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾರಂತೆ.

### ಮೂರನೆಯುವನು

ಅವರು ಇಲ್ಲಿದ್ದಿದ್ದರೆ ಜೊತೆ ಚೆನ್ನಾಗಿರುತ್ತಿತ್ತು. ಎಂದೂ ಕಾಣದಿದ್ದಂಥ ದೊಡ್ಡ ಕಾಳಗವನ್ನು ನೋಡಬಹುದಾಗಿತ್ತು!

### ಎರಡನೆಯುವನು

ಭೇಷ್— ನಮಗೇ ಜಯ!

### ನಾಲ್ಕನೆಯುವನು

ನೋಡತ್ತ. ಆ ಸರದಾರರೂ, ಸೈನಿಕರೂ ಪಿಸಪಿಸ ಮಾತ ನಾಡಿಕೊಳ್ಳುತ್ತಿದ್ದಾರೆ.

### ತುರಾನೀ ಸೈನಿಕರೆಲ್ಲರೂ

ಸರದಾರ್ ಸೊಹ್ರಾಬ್‌ಜೀಕು ಜೈ!

ಟಾರ್ಟರೀಕು ಜೈ!!

ಆಲಂಗೀರ್ ಅಫ್ರಾಸಾಯಿಬ್‌ಕು ಜೈ! ಜೈ!!

ಇನ್ನೊಂದು ಕಡೆ—

## ಫೆರೂದ್

ಫೆರಬೂಸ್, ಗೋದರ್ಸ್, ಜೊವಾರಾ, ಪೆರಾನ್‌ವೈಸಾ ಯವರ ಮಾತುಗಳನ್ನು ಕೇಳಿದಿರಲ್ಲ: ಈಗೇನು ಮಾಡುವುದು? ಸೊಹ್ರಾಬನೊಡನೆ ಕಾಳಗಮಾಡಿ ಆತನನ್ನು ಜಯಿಸಬಲ್ಲ ಗಂಡು ನಮ್ಮಲ್ಲಿ ಯಾರಿದ್ದಾರೆ? ಇರಾನಿಗೆ ಭಯಂಕರವಾದ ಅಪಮಾನ ವಾಗುವ ಹೊತ್ತು ಬಂದಿತು! ಶತ್ರುಗಳ ಕಡೆಯ ಭಟನು ಹೀಗೆ ತೋಳು ತಟ್ಟಿ ಕಾಳಗಕ್ಕೆ ಕರೆದಾಗ ಕಾಳಗಕ್ಕೆ ಒಪ್ಪದಿರುವುದು ಹೇಡಿತನ. ಒಲ್ಲೆವೆನ್ನುವುದು ಯೋಧಧರ್ಮವಲ್ಲ. ಒಪ್ಪೋಣ ವೆಂದರೆ ನಮ್ಮೆಲ್ಲಾರೂ ಆತನಿಗೆ ಸಮರಿಲ್ಲ. ಆತನೋ ಪರಾಕ್ರಮ ದಲ್ಲಿ ಸಿಂಹದಂಥವನು. ಚಟುವಟಿಕೆಯಲ್ಲಿ ಕಾಡುಜಿಂಕೆಯಂಥ ವನು—

## ಗೋದರ್ಸ್

ಫೆರೂದ್, ನನಗೊಂದು ಯೋಚನೆ ಹೊಳೆಯುತ್ತದೆ. ನಿರಾಸೆ ಬೇಡ. ನಮ್ಮ ಗೌರವ ಉಳಿಯುವ ಸಂಭವವೊಂದಿದೆ. ಆದರೆ ಆತನೊಪ್ಪಬೇಕು. ನಿನ್ನೆಯ ರಾತ್ರಿ ರುಸ್ತುಮರು ಪರಿ ವಾರದೊಡನೆ ಈ ಕಡೆ ಬಂದು ದೂರದಲ್ಲಿ ಗುಡಾರಗಳನ್ನು ನೆಡಿಸಿ ಕೊಂಡಿದ್ದಾರಂತೆ. ಬೆಳಗ್ಗೆ ನಮ್ಮ ಬೇಹುಕಾರನೊಬ್ಬನು ಈ ವಿಚಾರವನ್ನು ನನಗೆ ತಿಳಿಸಿದನು. ಮನಸ್ಸಿನಲ್ಲಿ ಆತನಿಗೆ ಖಾವಂ ದಿರ ಮೇಲೆ ಬಹಳ ಅಸಮಾಧಾನವಿದೆ. ನಮ್ಮ ಜನತೆಗೆ ಬಂದಿ ರುವ ಈ ಆಪತ್ತನ್ನು ನಿವಾರಿಸಲು ಆತನೊಬ್ಬನಿಂದ ಮಾತ್ರ ಸಾಧ್ಯ. ಬೇರೆ ಉಪಾಯವಿಲ್ಲ.

## ಫೆರೂದ್-ಫೆರಬೂಸ್

ಏನು, ರುಸ್ತುಮರೆ! ನಮ್ಮ ಕೆಲಸವಾಯಿತು! ಆದರೆ ಅವರನ್ನು ಒಪ್ಪಿಸುವವರು ಯಾರು?

**ಗೋದರ್ಸ್**

ನಾನು ಹೋಗಿ ಯಾವರೀತಿಯಿಂದಲಾದರೂ ಆತನನ್ನು ಒಪ್ಪಿಸುವೆನು. ನೀವು ಹೋಗಿ ಪೆರಾನ್‌ವೈಸಾಜೀಯವರಿಗೆ ನಾವು ಅವರ ಸವಾಲನ್ನು ಒಪ್ಪಿದೆವೆಂದೂ, ಕಾಳೆಗಕ್ಕೆ ಅವರು ಸಿದ್ಧಪಡಿಸಬಹುದೆಂದೂ ತಿಳಿಸಿ ಬನ್ನಿ.

**ಫೆರೂದ್-ಫೆರಬೂಸ್**

ಹೋಗು, ಬೇಗ ಹೋಗು ಗೋದರ್ಸ್.

**ಇರಾನೀ ಸೈನಿಕರು**

ಏನೋ ತೀರ್ಮಾನವಾದಂತಿದೆ. ನೋಡು ಫೆರೂದ್ ಮುಖದಮೇಲೆ ಸಂತೋಷ. ಗೋದರ್ಸ್‌ಜೀ ನೋಡು ಎಲ್ಲಿಗೋ ಹೋಗುತ್ತಿದ್ದಾರೆ.

**ಇರಾನೀ ಸೈನಿಕರೆಲ್ಲರೂ**

(**ಅರ್ಧ ಎತ್ತಿದ ಕಂಠದಲ್ಲಿ**) ಇರಾನ್‌ಕು ಜೈ!

ಫೆರೂದ್‌ಜೀಕು ಜೈ!!

ಆಲಂಗೀರ್ ಖೈಖಾವೂಸ್‌ಕು ಜೈ! ಜೈ!!

**ತೆರೆ.**

---

## ದೃಶ್ಯ ೭

ರುಸ್ತುಮರ ಡೇರೆ, ಆತನೂ ಫಲಾಹಾರ ಮುಗಿಸಿ ಕುಳಿತಿದ್ದಾನೆ. ಎಡ ಮುಂಗೈ ಮಣಿಕಟ್ಟಿನಮೇಲೆ ಒಂದು ಬೇಟೆಯ ಡೇಗೆಯನ್ನು ನಿಲ್ಲಿಸಿಕೊಂಡು ಅದನ್ನು ಕೀಟಲೆಮಾಡುತ್ತ, ಅದರ ರೆಕ್ಕೆಗಳನ್ನು ಹರಡುತ್ತ ಮುದುರುತ್ತ ಕುಳಿತಿದ್ದಾನೆ.

ಗೋದರ್ಸ್ ಪ್ರವೇಶ

### ರುಸ್ತುಂ

(ಡೇಗೆಯನ್ನು ಕೆಳಗೆ ಹಾಕಿ ಎರಡು ಕೈಗಳನ್ನೂ ಮುಂದೆ ಚಾಚಿ) ಓಹೋ ಹೋ ಗೋದರ್ಸ್! ಇದೇನು ಈ ಅಪೂರ್ವ ಲಾಭ! ನನ್ನ ಮೇಲೆ ಇಷ್ಟು ದೊಡ್ಡ ಅನುಗ್ರಹ! ಕಣ್ಣಿಂದ ನಿನ್ನನ್ನು ನೋಡಿಯೇ ಮೂರುನಾಲ್ಕು ವರ್ಷಗಳ ಮೇಲಾದುವು, ಅಲ್ಲವೆ? ಒಳಗೆ ಬಾ. ಮೊದಲು ಸ್ವಲ್ಪ ಫಲಾಹಾರ ಮಾಡು. ಆಮೇಲೆ ಉಳಿದ ವಿಚಾರ....ಗೋದರ್ಸ್, ಅದೇಕೆ ನನ್ನ ಡೇರೆಯೊಳಕ್ಕೆ ಬರಕೂಡದೆಂದಿದ್ದೀಯೇನು? ಅಥವಾ ನಮ್ಮಲ್ಲಿ ಒಂದು ಲೋಟ ಷರಬತ್ತನ್ನೂ ಕುಡಿಯಬಾರದೆಂದಿದ್ದೀಯೊ?

### ಗೋದರ್ಸ್

ಫಲಾಹಾರ ಪಾನೀಯಗಳಿಗೆ ಸಮಯವಿಲ್ಲ ರುಸ್ತುಂ. ಅವಕ್ಕೆ ಬೇರೆ ಕಾಲವಿದೆ. ಈಗ ಗುರುತರವಾದ ಪ್ರಸಂಗವೊಂದೊದಗಿದೆ. ರುಸ್ತುಂ, ನೀನು ನಮಗೆ ಮಾಡಬೇಕಾದ ಉಪಕಾರವೊಂದಿರುವುದು.

### ರುಸ್ತುಂ

ನಾನು! ನಿಮಗೆ! ಉಪಕಾರಮಾಡುವುದು!! ಅಂಥ ಕ್ಷಾಮಡಾಮರಗಳು ನಿಮಗೇನು ಬಂದಿರುವುದು?

### ಗೋದರ್ಸ್

ಇರಾನಿಗೆ ಅಪಮಾನವಾಗುವ ಗತಿ ಬಂದಿದೆ. ನೀನು ಸೊಹ್ರಾಬನ ಕೀರ್ತಿಯನ್ನು ಕೇಳಿರಬಹುದು. ಆತನ ಪರಾಕ್ರಮ

ವೆಂಥುದೆಂಬುದು ನಿನ್ನ ಕಿವಿಗೆ ಬಿದ್ದಿರಬಹುದು, ಬಿದ್ದಿರಬೇಕು—

**ರುಸ್ತುಂ**

ಹುಂ. ಅವನ ವಿಚಾರ ನನಗೇಕೆ—ನನ್ನಲ್ಲೇಕೆ?

**ಗೋದರ್ಸ್**

ನಮ್ಮ ಸೈನ್ಯದ ವೀರಾಗ್ರಣಿಯೊಡನೆ ದ್ವಂದ್ವಯುದ್ಧವನ್ನು ಕೋರಿ ನಮ್ಮ ಕಡೆಗೆ ಆತನು ಈ ದಿನ ಹೇಳಿಕಳುಹಿಸಿದ್ದಾನೆ.

**ರುಸ್ತುಂ**

ಇರಬಹುದು.

**ಗೋದರ್ಸ್**

ಅವನೆದುರಿಗೆ ಏಕಾಂಗಿಯಾಗಿ ನಿಂತು ಯುದ್ಧಮಾಡಬಲ್ಲ ಯೋಧನು ನಮ್ಮ ಸೈನ್ಯದಲ್ಲಿ ಈಗಾರೂ ಇಲ್ಲ. ನಿನಗೊಬ್ಬನಿಗೆ ಮಾತ್ರ ಈ ಸಾಹಸವು ಸಾಧ್ಯ. ನಾವೆಲ್ಲರೂ ನಿನ್ನನ್ನು ನಂಬಿ ಕೊಂಡಿದ್ದೇವೆ. ನಮ್ಮ ಜನತೆಯ ಮಾನವುಳಿಸುವುದಕ್ಕಾದರೂ ನಮ್ಮ ಪರವಾಗಿ ನೀನು ದಯಮಾಡಿ ಕಾಳೆಗಮಾಡಬೇಕು. ಸೊಹ್ರಾಬನು ಅವರ ಸೈನ್ಯದಲ್ಲಿ ಕಾಲಿಟ್ಟಂದಿನಿಂದ ನಮಗೆ ಜಯ ದೊರೆತಿಲ್ಲ. ಈಗ ನಾವು ಕಾಳೆಗಕ್ಕೆ ಸಮ್ಮತಿಸವಾದರೆ ಇರಾನಿಗೆ ಸೂರ್ಯಚಂದ್ರರಿರುವವರೆಗೂ ಅಳಸದಂಥ ಕಳಂಕವು ಬರುವುದು.

**ರುಸ್ತುಂ**

ತೆಗೆ ತೆಗೆ, ಇರಾನಿನಲ್ಲಿ ವೀರರಿಗೇನು ಕಡಿಮೆ? ಎಷ್ಟೋ ಜನ ಯುವಕ ವೀರರಿದ್ದಾರೆ—ವೀರಶ್ರೇಷ್ಠರಿದ್ದಾರೆ. ನಿಮ್ಮ ರಾಜನ, ಹೌದು ಗೋದರ್ಸ್, ಖೈಖಾವೂಸನ ಬಾಯಿಂದಲೇ ಆ ಮಾತನ್ನು ಕಿವಿಯಾರ ನೀನೇ ಕೇಳಿದ್ದೀಯಲ್ಲ. ನಮ್ಮಂಥ ಮುದುಕರಿಂದ ಆತನಿಗಾಗಲಿ ಇರಾನಿಗಾಗಲಿ ಯಾವ ಉಪಕಾರವಾದೀತು? ಯುವಕರಿದ್ದಾರೆ; ಯುವಕರ ಪಾಲಕನೂ, ಪೋಷಕನೂ,

ಉತ್ತೇಜಕನೂ ರಾಜನಿದ್ದಾನೆ; ನಮ್ಮಂಥ ಮುದುಕರು ಇದ್ದರೆ ಎಷ್ಟೋ ಹೋದರೂ ಅಷ್ಟೇ ಆತನಿಗೆ.

## ಗೋದರ್ಸ್

ಇಲ್ಲ ರುಸ್ತುಂ. ನೀನು ಹಾಗೆ ಹೇಳಕೂಡದು, ಆತನಿಗೆ ಅನುಭವವಿಲ್ಲ,—ಹುಡುಗತನ. ಯಾವ ಸಮಯದಲ್ಲಿಯೊ ಏನೊ ಎಂದುದಕ್ಕೆ ಕ್ರೋಧವನ್ನು ನೆನೆಯುವ ಕಾಲವಿದಲ್ಲ. ಇಡೀ ಇರಾನಿನಲ್ಲಿ ನಿಜವಾಗಿಯೂ ನಿನ್ನನ್ನುಳಿದು, ಸೊಹ್ರಾಬನನ್ನು ಇದಿರಿಸಬಲ್ಲವರಿಲ್ಲ. ಕೆಲವರು ವಯಸ್ಸಾದವರು; ಉಳಿದವರು ಹುಡುಗರು.

## ರುಸ್ತುಂ

ನಾನು ಪ್ರಾಯದ ಹುಡುಗನೊ? ನಿನಗಿಂತ ಹೆಚ್ಚು ವಯಸ್ಸಾದವನಲ್ಲವೆ? ಯುವಕರನ್ನು ನಂಬಿರುವವನು ಖೈಖಾಪ್ರೂಸ್. ಸೊಹ್ರಾಬ್ ಯುವಕ; ಅವನೊಡನೆ ಯುದ್ಧಮಾಡುವವನೂ ಯುವಕನಾಗಿಯೇ ಇರಬೇಕು. ಅವನು ತಿರಸ್ಕಾರ ಮಾಡುವನೆಂದರೆ ನಿಮ್ಮಲ್ಲಿನ ಯುವಕರಿಗೆ ಅಪಮಾನ. ಈ ವಯಸ್ಸಿನಲ್ಲಿ ನನಗೇನು ಬೇಕಾಗಿದೆ?

## ಗೋದರ್ಸ್

ಸೊಹ್ರಾಬನ ಪ್ರಚಂಡ ಸಾಹಸವನ್ನು ನೀನು ಒಂದು ಗಳಿಗೆಯ ಕಾಲ ಕಣ್ಣಾರ ನೋಡಿದ್ದರೆ ನೀನು ಈ ರೀತಿ ಮಾತನಾಡುತ್ತಿರಲಿಲ್ಲ, ರುಸ್ತುಂ.

## ರುಸ್ತುಂ

ನೋಡದಿದ್ದರೇನು? ಬೇಕಾದಷ್ಟು ಕೇಳಿದ್ದೇನೆ. ಇನ್ನೂ ಹೆಚ್ಚಾಗಿ ಕೇಳಿದ್ದೇನೆ. ಎಲ್ಲೆಲ್ಲಿಯೂ ಅವನ ಪ್ರಶಂಸೆಯೇ ತುಂಬಿದೆ. 'ಅಂಥ ಮಗನು ನನಗೊಬ್ಬನಿದ್ದಿದ್ದರೆ!'—ಎಂದುಕೊಂಡೂ ಇದ್ದೇನೆ. ನಮ್ಮ ವೀರ ವಂಶವು ಇಲ್ಲಿಗೇ ಕೊನೆಯಾಗ

ಬೇಕಾಯಿತು. ನನಗಿರುವವಳು ಅಡರ್‌ಬೈಜಾನಿನಲ್ಲಿರುವ ಆ ಅಬಲೆ ಹುಡುಗಿ. ನನ್ನ ಹೆಸರನ್ನು ಮುಂದುವರಿಸುವ ಅಂಥ ಮಗ ನೊಬ್ಬನಿದ್ದಿದ್ದರೆ!....ಕತ್ತಿ ಭಲ್ಲೆಗಳನ್ನು ಅವನಿಗಿತ್ತು, ರಂಗಕ್ಕೆ ಕಳುಹಿಸಿ, ಅವನ ಕೀರ್ತಿಯನ್ನು ಕೇಳಿ ಕಾಲಹಾಕುತ್ತ, ನನ್ನ ಹೆಸರಿನ ಭಯದಿಂದಲೇ ನನ್ನ ತಂದೆಯ ಶತ್ರುಗಳನ್ನು ದೂರವಿರಿಸಿ ವೃದ್ಧರಾದ ಅವರ ಸೇವೆಮಾಡಿಕೊಂಡು ಸುಖವಾಗಿರುತ್ತಿದ್ದೆ. ಆ ಅದೃಷ್ಟ ನನ್ನ ಹಣೆಯಲ್ಲಿ ಬರೆಯಲಿಲ್ಲ.

### ಗೋದರ್ಸ್

ಆಗದುದಕ್ಕೂ ಇಲ್ಲದುದಕ್ಕೂ ವ್ಯಥೆಪಟ್ಟು ಪ್ರಯೋಜನ ವೇನು? ಅಖಂಡ ಪರ್ಷಿಯಾಕ್ಕೇ ರಾಹು ಮೂಡಿದಂತೆ ಸೊಹ್ರಾಬನ ರೂಪದಲ್ಲಿ ವಿಪತ್ತು ಕವಿದಿರುವಾಗ ನೀನು ಹೀಗೆ ಮಾತನಾಡುವುದು ಸರಿಯಲ್ಲ. ಅಲ್ಲದೆ, ಕೇಳು—

### ರುಸ್ತುಂ

ನನಗೆ ಬೇಕಿಲ್ಲ, ಗೋದರ್ಸ್. ಕೃತಘ್ನರ ಪರವಾಗಿ, ನಾನು ಬೇಡವಾಗಿರುವ ರಾಜನ ಪರವಾಗಿ, ನಾನೇಕೆ ಯುದ್ಧಮಾಡ ಬೇಕು? ಅವನೂ ಅವನ ಕೀರ್ತಿಯೂ ಇದ್ದರೆ ಇರಲಿ ಹೋದರೆ ಹೋಗಲಿ.

### ಗೋದರ್ಸ್

ಜನರೇನೆಂದುಕೊಂಡಾರು ಬಲ್ಲೆಯೊ?

### ರುಸ್ತುಂ

ಜನರಿಗೂ ಇದಕ್ಕೂ ಏನು ಸಂಬಂಧ?

### ಗೋದರ್ಸ್

ನೀನಿಲ್ಲಿಗೆ ಬಂದಿರುವುದು ಈಗಾಗಲೆ ಕೆಲವರಿಗೆ ತಿಳಿದಿದೆ. ಸಂಜೆಯೊಳಗಾಗಿ ಎಲ್ಲ ಸೈನಿಕರಿಗೂ ಗೊತ್ತಾಗುವುದು.

ರುಸ್ತುಂ

ಆಗಲಿ.

ಗೋದರ್ಸ್

ಇಂಥ ವಿಪತ್ಸಂಧಿಯಲ್ಲಿ ಶತ್ರುಗಳ ಪರವಾಗಿ ಸೊಹ್ರಾಬನು 'ನಿಮ್ಮಲ್ಲಿ ವೀರರಿದ್ದರೆ ಬಂದು ಕಾಳಗಕೊಡಬಹುದು' ಎಂದು ಕರೆಯುತ್ತಿರುವಾಗ—ನಿನ್ನಕೂಡೆಯೇ ಯುದ್ಧಮಾಡಬೇಕೆಂದು ಅವನು ಊರೂರೂ ನಿನ್ನನ್ನೇ ಹುಡುಕಿಕೊಂಡು ತಿರುಗುತ್ತಿರುವಾಗ—

ರುಸ್ತುಂ

ಏನು—ಏನು ಹೇಳಿದೆ? ನನ್ನನ್ನು ಹುಡುಕಿಕೊಂಡು ತಿರುಗುತ್ತಿರುವನೆ? ಊಂ! ಊಂಹ್!

ಗೋದರ್ಸ್

ಆತನು ಯಾರನ್ನು ಹುಡುಕಿಕೊಂಡು ತಿರುಗುತ್ತಿರುವನೊ ಆ ನೀನು ಕಾಳಗವನ್ನು ಒಲ್ಲೆನೆಂದರೆ—ಮುಖ ಮರೆಸಿಕೊಂಡರೆ—ಎದುರಿಗಿದ್ದು, ನಾವು ಬೇಡಿಕೊಂಡಮೇಲೂ ನೀನು ಕಾಳಗಮಾಡೆನೆಂದರೆ, ಪ್ರಪಂಚವೇನೆಂದೀತು ಕಾಣೆಯಾ—

ರುಸ್ತುಂ

ಏನೆಂದೀತು?—

ಗೋದರ್ಸ್

'ರುಸ್ತುಮನು ಹಣ್ಣಾದ. ಹಿಂದೆ ಗಳಿಸಿದ ಕೀರ್ತಿಯನ್ನು ಕಾಪಾಡಿಕೊಳ್ಳಬೇಡವೆ? ಲೋಭಿಗೆ ತನ್ನ ಧನವು ಸುರಕ್ಷಿತವಾಗಿರಬೇಕೆಂಬ ಆಸೆಯಿಲ್ಲವೆ? ರುಸ್ತುಮನೂ ಹಾಗೆಯೇ. ಸ್ವಾಭಾವಿಕವೇ ತಾನೆ? ಹೊಸ ವೀರ್ಯವುಳ್ಳ ಹುಡುಗರಿಂದ ಆ ಕೀರ್ತಿಗೆ ಅಪಾಯ ತಾಕದಂತೆ ಆ ಹಳೆಯ ಕೀರ್ತಿಯನ್ನು ಬಹು ಎಚ್ಚರಿಕೆಯಿಂದ ಕಾಪಾಡಿಕೊಳ್ಳುತ್ತಿದ್ದಾನೆ, ಎನ್ನದೆ? ಅದು ನಿನಗೆ ಗೌರವವೆ? ನಿನ್ನ ಚಾರಿತ್ರಕ್ಕೆ ಒಪ್ಪುವಂಥುದೆ?

### ರುಸ್ತುಂ

(ಸಿಡಿಗೋಪದಿಂದ) ನೀನೇಕೆ ಹೀಗೆ ಮಾತನಾಡುವೆ, ಗೋದರ್ಸ್! ನನ್ನ ಸ್ವಭಾವವು ನಿನಗೆ ಹೊಸದಲ್ಲ. ನೀನು ವರ್ಣಿಸುವಂಥ ನರಾಧಮನೂ ಹೇಡಿಯೂ ನಾನಲ್ಲವೆಂಬುದನ್ನು ನೀನರಿಯೆಯಾ? ಜಗತ್ತರಿಯದೆ? ಪ್ರತಿಭಟರ ಸಂಖ್ಯೆಯು ಒಬ್ಬರಿಂದ ಹೆಚ್ಚಾದ ರೇನು ಕಡಿಮೆಯಾದರೇನು? ಅವರು ವೀರರಾದರೇನು ಹಂದೆ ಗಳಾದರೇನು? ವಯಸ್ಸಾದವರಾದರೇನು ಹುಡುಗರಾಗಿದ್ದ ರೇನು? ಅವರೆಲ್ಲ ಮರ್ತ್ಯರೇ ಅಲ್ಲವೆ—ನಾನು··ರುಸ್ತುಮನೇ ಅಲ್ಲವೆ?····ಬಿಡು ಗೋದರ್ಸ್. ಅನಾಮಧೇಯರಿಗಾಗಿ ಯಾರು ಮಹತ್ಕಾರ್ಯಗಳನ್ನು ಮಾಡಿಯಾರು?

### ಗೋದರ್ಸ್

ಆದರೆ—ಆದರೆ····

### ರುಸ್ತುಂ

ಮತ್ತೂ ಆದರೆ? ಹಾಗಿದ್ದರೆ ನೋಡುವೆ ಬಾ, ರುಸ್ತುಮನು ತನ್ನ ಕೀರ್ತಿಯನ್ನು ಹೇಗೆ ಕೂಡಿಟ್ಟು ಕಾಪಾಡುವನೆಂಬುದನ್ನು ತೋರಿಸುತ್ತೇನೆ.

### ಗೋದರ್ಸ್

ಈ ಮಾತು ರುಸ್ತುಮರ ಸ್ವಂತ ಕೊರಲಿನಿಂದ ಬರುವಂತಿದೆ.

### ರುಸ್ತುಂ

ನಿನ್ನ ಕೆಲಸವಾಯಿತು. ಆದರೆ ಒಂದು ಮಾತನ್ನು ಲಾಲಿಸು.

### ಗೋದರ್ಸ್

ಇರಾನಿಗೆ ಅದೃಷ್ಟೋದಯವಾಯಿತು ರುಸ್ತುಂ. ನಿನ್ನ ಕೀರ್ತಿಯ ನೆಳಲಿನಲ್ಲಿ ಬೆಳೆದಿದೆ ಇರಾನ್. ಅದರ ಮಡಿಲಿನಲ್ಲಿ ನಾವು. ಏನು ಹೇಳು.

## ರುಸ್ತುಂ

ನಾನು ಸಾಮಾನ್ಯ ಕವಚವೊಂದನ್ನು ತೊಟ್ಟು ಅಜ್ಞಾತನಂತೆ ಯುದ್ಧಮಾಡುವೆನು—ನೀನು ಈ ರೀತಿ ಹೇಳಿದುದಕ್ಕಾಗಿ. ಆದರೆ ಮಹಾವೀರ ರುಸ್ತುಮನು ಹುಲುಮನುಷ್ಯರ ಎದುರಿಗೆ ಕತ್ತಿಯೆತ್ತಿ ದ್ವಂದ್ವಯುದ್ಧಕ್ಕೆ ನಿಂತನೆಂದು ಮುಂದಕ್ಕೆ ನಿನ್ನಾ ಜನರು ಮಾತನಾಡಿಕೊಳ್ಳದಿರಲಿ. . . . ಒಂದು ಲೋಟ ಷರಬತ್ತು ತೆಗೆದುಕೊಂಡು ಹೋಗು—ಈಗಲಾದರೂ ಆಗಬಹುದಲ್ಲ.

## ಗೋದರ್ಸ್

(ಹಸನ್ಮುಖಿಯಾಗಿ) ಆಗಬಹುದು ರುಸ್ತುಂ. ಆದರೂ ಹೆಚ್ಚು ಹೊತ್ತಿನ ಅವಕಾಶವಿಲ್ಲ. ಕೆಲಸ ಮೊದಲು (ಇಬ್ಬರೂ ಸೇವಿಸುವರು) ಉಪಚಾರ ಆಮೇಲೆ. ಒಂಬತ್ತು ಘಂಟೆಗೆ ಕಾಳಗ. ನಾವೆಲ್ಲರೂ ಸಿದ್ಧರಾಗಿರುವೆವು.

## ರುಸ್ತುಂ

ಸಿದ್ಧನಾಗಿ ನಿಲ್ಲುವೆನು. ನೀನಿನ್ನು ಹೋಗಿ ಬಾ (ಗೋದರ್ಸ್ ಬೀಳ್ಕೊಳ್ಳುವನು). ಬಹ್ರಾಮ್, ಜಾಮ್‌ಷೇದ್, ಯಾರೊ ಅಲ್ಲಿ!

## ಅವರು

ಜನಾಬ್! ಹಜೂರ್!

## ರುಸ್ತುಂ

(ಬಹ್ರಾಮನನ್ನು ಕುರಿತು) ನನ್ನ ಬೊಖಾರಾ ಕವಚವನ್ನು ಸಿದ್ಧಪಡಿಸು.

(ಜಾಮಷೇದನನ್ನು ಕುರಿತು) ನನ್ನ ಗದೆ ಭಲ್ಲೆಗಳನ್ನೂ ಸಿಂಧು ಸ್ಥಾನ ಖಡ್ಗವನ್ನೂ ತೆಗೆದುಕೊಂಡು ಬಾ ಹೋಗು.

## ಇಬ್ಬರೂ

ಹುಕುಂ (ಹೋಗುವರು).

ತೆರೆ.

---

# ದೃಶ್ಯ ೮

**ಆಕ್ಸಸ್‌ನದಿಯ ದಂಡೆಯಲ್ಲಿ ಮರಳಿನಮೇಲೆ ಎರಡೂ ಕಡೆಯ ಸೈನ್ಯಗಳು. ಕಾಳೆಗ ಪ್ರಚಾಲಕರು ಪೆರಾನ್‌ವೈಸಾ, ಫೆರೂದ್. ತುರಾನಿನ ಕಡೆ ಸೊಹ್ರಾಬನು ಕಣ್ಣುತೆರೆದು ಕನಸಿನಲ್ಲಿರುವವನೆಂಬಂತೆ ನೋಡುತ್ತಿದ್ದಾನೆ. ಆ ಕಡೆಯಿಂದ ರುಸ್ತುಮನ ಪ್ರವೇಶ.... ಸೊಹ್ರಾಬನು ನಾಲ್ಕಡಿ ಮುಂದೆ ಬರುವನು.**

**ರುಸ್ತುಂ ಬಂದವನು ದೂರದಿಂದಲೇ ಸೊಹ್ರಾಬನ ಮುಖವನ್ನೂ ಮೈಕಟ್ಟನ್ನೂ ವೀರಭಂಗಿಯನ್ನೂ ನೋಡಿ ಚಮಕಿತನಾಗಿ ಅವನ ಹತ್ತಿರಕ್ಕೆ ಬಂದು ಅವನ ಭುಜಗಳನ್ನು ಮುಟ್ಟಿ,**

## ರುಸ್ತುಂ

ಸೊಹ್ರಾಬ್, ನೀನಿನ್ನೂ ಹುಡುಗನಾಗಿದ್ದೀಯೆ. ನೂರು ವರ್ಷ ಬದುಕಿ ಬಾಳಬೇಕಾದವನು; ಪ್ರಚಂಡವಾದ ಕೀರ್ತಿಯನ್ನು ಸಂಪಾದಿಸಿದ್ದೀಯೆ; ನಿನಗೇಕೆ ಇಂಥ ವಿಪರೀತಯೋಚನೆ ಬಂತು? ಹಿತ ಹೇಳುವವರಿಲ್ಲದೆ ಹೋದರೆ? ಅಲ್ಲವೊ, ಸಾವಿಗಿಂತ ಬದುಕು ಮೇಲಲ್ಲವೆ? ನೆಲದಲ್ಲೊರಗಿ ತಣ್ಣಗಾಗುವುದಕ್ಕಿಂತ ಈ ಸುಂದರವಾದ ಜಗತ್ತಿನಲ್ಲಿ ಸೂರ್ಯನ ಬೆಳಕು ಕಾವುಗಳಲ್ಲಿ ಬೆಚ್ಚಗಿದ್ದು ಬಾಳುವುದು ಮೇಲಲ್ಲವೆ? ನಿನ್ನನ್ನು ನೋಡಿ ಕನಿಕರ ಬರುತ್ತಿದೆ. ನೋಡು, ನಿನಗಿಂತ ಆಕೃತಿಯಲ್ಲಿ ನಾನು ದೊಡ್ಡಾಳು; ಪುಷ್ಟನಾಗಿದ್ದೇನೆ; ಹೆಚ್ಚು ವರ್ಷಗಳ ಅನುಭವವುಳ್ಳವನು. ನನಗೆ ಸಮರಾದ ನೂರಾರು ಯೋಧರೊಡನೆ ಕಾಳೆಗ ಮಾಡಿದ್ದೇನೆ. ನಾನು ನಿಂತೆಡೆ ಶತ್ರುವಿಗೆ ಜಯವಾಗಿಲ್ಲ. ಕಂಡು ಕಂಡು ಸಾವಿನ ಬಾಯೊಳಕ್ಕೇಕೆ ನುಗ್ಗುವೆ? ಬಾ ಸೊಹ್ರಾಬ್, ನನಗೆ ಗಂಡು ಮಕ್ಕಳಿಲ್ಲ. ನಿನ್ನಂಥ ವೀರ ಯುವಕನು ಇರಾನಿನಲ್ಲೇ ಬೇರೊಬ್ಬನಿಲ್ಲ. ಈ ಕಾಳೆಗದ ಗೊಡವೆ ಬಿಡು, ನನ್ನೊಡನೆ ಬಾ. ಮಗನಂತೆ ನಿನ್ನನ್ನು ಸಾಕಿಕೊಳ್ಳುವೆನು. ನನ್ನ ಧ್ವಜಪಟಿಯಲ್ಲಿ ಇದಕ್ಕೂ ಹೆಚ್ಚಿನ ಕೀರ್ತಿಯನ್ನು ಪಡೆ. ಇಲ್ಲವೆ, ನಮ್ಮೂರಿಗೆ ಹೋಗೋಣ. ಮೂರ್ಖಮಾಡಿ ನಾಶವಾಗಬೇಡ.

## ಸೊಹ್ರಾಬ್

(ಯಾವುದೊ ಮಗ್ನತೆಯಿಂದ ಎಚ್ಚತ್ತವನಂತೆದ್ದು, ಆತನ ಕೈಗಳನ್ನು ಹಿಡಿದುಕೊಂಡು.) ವೃದ್ಧ ವೀರ, ನೀನಾರು ಹೇಳು. ನೀನು ರುಸ್ತುಮನೇನು? ರುಸ್ತುಮನೇ ಅಲ್ಲವೆ ಹೇಳು.

## ರುಸ್ತುಂ

(ಹಾಗೇ ಯೋಚಿಸುತ್ತ ಹಿಂದಕ್ಕೆ ಸರಿದು ಗೋದರ್ಸ್‌ಅನ್ನು ಕುರಿತು) ನೋಡಿದೆಯಾ ಗೋದರ್ಸ್, ಈ ನರಿಯ ಯುಕ್ತಿಯನ್ನು! ನಾನು ರುಸ್ತುಮನೆಂದು ಹೇಳಿದೆನೆನ್ನು; ತಕ್ಷಣವೇ ಏನಾದರೊಂದು ನೆಪವೆತ್ತಿ ನನ್ನ ಪರಾಕ್ರಮವನ್ನು ಸ್ತುತಿಸಿ ಅದೊ ಇದೊ ಅಂಗ ಮಣಿ ಕೊಟ್ಟು, ಕಾಳೆಗವನ್ನು ನಿಲ್ಲಿಸಿ, ಯುದ್ಧಗಳು ಮುಗಿದು ತಾನು ತುರಾನಿಗೆ ಹಿಂತಿರುಗಿದಾಗ ವಿಶೇಷ ದಿನಗಳಲ್ಲಿ ಅನೇಕ ವೀರರು ಸಂದಣಿಸಿರುವಾಗಲೊ, ಅಫ್ರಾಸಿಯಾಬನ ಓಲಗ ದಲ್ಲಿಯೊ, ಉಪವನ ನಾಟ್ಯಗಳಲ್ಲಿ ಸುಂದರಿಯರ ಮಧ್ಯದಲ್ಲಿಯೊ, ಹಿಂದೆ ಇಂಥ ಒಂದು ಸಮಯದಲ್ಲಿ ಮಹಾ ಮಹಾವೀರರು ಆಕ್ಸಸ್ ತೀರದಲ್ಲಿ ನೆರೆದಿದ್ದ ವೇಳೆ 'ನಾನು ಕಾಳೆಗಕ್ಕೆ ತೋಳ್ತಟ್ಟಿ ಕರೆಯಲು ಇರಾನಿನವರಾರಿಗೂ ಧೈರ್ಯವಿಲ್ಲದೆ ಹೋಯಿತು; ರುಸ್ತುಮನೊಬ್ಬನು ಮಾತ್ರ ಎದುರಿಗೆ ಬಂದು ನಿಲ್ಲಲು ಧೈರ್ಯ ಮಾಡಿದ; ಆಗ ನಾವು ಕೈ ಅಲುಗಿಸಿ ಸಮಾನಸ್ಕಂಧರಂತೆ ಮರ್ಯಾದೆಯಿಂದ ಬೀಳ್ಕೊಂಡೆವು' ಎಂದು ಬಡಾಯಿ ಕೊಚ್ಚು ವನು. ಈ ತುರಾನೀ ಚಿಳ್ಳೆಗಳನ್ನು ನಾನು ಚೆನ್ನಾಗಿ ಬಲ್ಲೆ. ನಾನದಕ್ಕೆ ಅವಕಾಶಕೊಟ್ಟೇನೇ? ನನ್ನ ಮೂಲಕ ಇರಾನಿಗೆ ಅಪಮಾನಮಾಡಿಸಿಯೇನೆ? (ಸೊಹ್ರಾಬನ ಕಡೆಗೆ ಪುನಃ ಬರುವನು).

## ಸೊಹ್ರಾಬ್

(ಇಷ್ಟರಲ್ಲಿ ಸೊಹ್ರಾಬನು ಪೆರಾನ್‌ವೈಸಾ ಹತ್ತಿರ ಹೋಗಿ) ನಿಮಗೆ ಹೇಗೆ ಕಾಣುವುದು ಆತನು ರುಸ್ತುಮರಂತಿಲ್ಲವೆ?

### ಪೆರಾನ್ವೈಸಾ

ಹಾಗೆ ಭ್ರಾಂತಿಯೇನೋ ಆಗುವುದು ಸೊಹ್ರಾಬ್. ಆದರೂ ಈತನು ರುಸ್ತುಮನಲ್ಲ. ರುಸ್ತುಮನು ಹೀಗೆ ಬಂದು ನಿಲ್ಲಬೇಕಾಗಿತ್ತೆ? ಅವನ ಸಿಂಹನಾದ ನಡೆಗಳನ್ನು ನಾನರಿಯೆನೆ? ಆತನ ಕವಚ ಕುಲಾವಿಗಳಿವೇ? ಆತನ ಕುತ್ತಿಗೆಯಲ್ಲಿ ನರೆಯೆಂದರೇನು? ಚರ್ಮದಲ್ಲಿ ಸುಕ್ಕೆಂದರೇನು? ಉಹುಂ.

### ರುಸ್ತುಂ

(ಸೊಹ್ರಾಬನು ಮರಳಿ ಬರಲು ಅರ್ಧ ಕುಪಿತ ಸ್ವರದಿಂದ) ನಾನು ಯಾರಾದರೇನು? ಕಾಳೆಗಕ್ಕೆ ನೀನೊಬ್ಬ ವೀರನನ್ನು ಕರೆದಿದ್ದೀಯೆ, ವೀರನೊಬ್ಬನು ಬಂದು ನಿಂತಿದ್ದೇನೆ. ಇಷ್ಟು ಸಾಲದೇನು?

### ಸೊಹ್ರಾಬ್

(ಬಾಗಿ ಆತನ ಮೊಣಕಾಲುಗಳನ್ನು ಕಟ್ಟಿಕೊಂಡು ಮುಖವೆತ್ತಿ ನೋಡುತ್ತ) ನಿನ್ನ ತಂದೆತಾಯ್ಗಳಾಣೆ, ನಿನ್ನಾತ್ಮದಾಣೆ ಹೇಳು, ನೀನೇ ರುಸ್ತುಮನಲ್ಲವೆ? ನನ್ನನ್ನು ವಂಚಿಸಬೇಡ.

### ರುಸ್ತುಂ

(ತಿರಸ್ಕಾರದಿಂದ ಬಿಡಿಸಿಕೊಂಡು) ಓಹೋ ಏಕೆ, ರುಸ್ತುಮನೆಂದು ಹೇಳಿದರೆ ಉಪಾಯದಿಂದ ನುಣುಚಿಕೊಂಡು ನನ್ನನ್ನೊಡಂಬಡಿಸಿ ಕಾಳೆಗವನ್ನು ನಿಲ್ಲಿಸುವುದಕ್ಕೊ? ಹೇಡಿಯಂತೆ ಆ ಪ್ರಶ್ನೆಯನ್ನೇಕೆ ಕೇಳುವೆ? ಪೋರ! ರುಸ್ತುಮರ ಹೆಸರನ್ನು ಕೇಳಿದೊಡನೆಯೆ ವೈರಿಗೆ ಎದೆ ನಡುಕ ಬರುವುದೋ! ಅವನ ಮುಖವನ್ನು ನೋಡಿ ವೈರಿಯು ಹೆದರಿ ಓಡುವನೋ! ರುಸ್ತುಮನೇ ಎದುರಿಗಿದ್ದಾನೆಂದು ತಿಳಿದೆಯಾದರೆ ನೀನು ಕಾಳೆಗಮಾಡುವೆಯೇನೊ? ನಿನ್ನೆದುರಿಸಿ ನಿಲ್ಲಲು ರುಸ್ತುಮನೇ ಆಗಬೇಕೊ! ನಿನ್ನ ತಾಯಿ ಎರೆದಿರುವ ಹಾಲು ಬೆಣ್ಣೆಗಳ ಗುರುತು ಕೆನ್ನೆಗಳಿಂದ ಇನ್ನೂ ಅಳಸಿ ಹೋಗಿಲ್ಲ! ರುಸ್ತುಮನನ್ನು ಬಿಟ್ಟು ಬೇರೊಬ್ಬರೊಡನೆ ಕಾಳೆಗ

ಮಾಡೆಯೋ! ಹ್ಹ ಹ್ಹ ಹ್ಹಾ, ನಾನೊಬ್ಬ ಅನಾಮಧೇಯನು ಬಂದಿದ್ದೇನೆ. ಧೈರ್ಯವಿದ್ದರೆ ನಿಂತು ಕಾಳೆಗಮಾಡು. ಇಲ್ಲವಾದರೆ ಕಾಲಿಗೆ ಬೀಳು. ಕ್ಷಮಾಪಣೆ ಬೇಡಿ ನಿನ್ನ ನರಿ ಮೋರೆಯನ್ನು ನನ್ನೆದುರಿನಿಂದ ತೊಲಗಿಸಿಕೊಂಡು ಹೋಗು.

## ಸೊಹ್ರಾಬ್

(ಕನಲಿ) ಎಷ್ಟು ಸೊಕ್ಕೊ ನಿನಗೆ? ವಯಸ್ಸಾಗಿದೆಯೆನ್ನುವೆ, ಆದರೂ ಬಾಯಿಹಿಡಿದು ಮಾತನಾಡುವುದನ್ನು ನಿನಗೆ ಯಾರೂ ಕಲಿಸಿಲ್ಲವೆಂದು ತೋರುತ್ತಿದೆ. ನಾನು ಕಲಿಸುವೆನು ತಡೆ. ಮಾತುಗಳಿಗೆ ಹೆದರಿ ಹಿಮ್ಮೆಟ್ಟಿ ಜಿಳಿತುಕೊಳ್ಳುವುದಕ್ಕೆ ನಾನು ಹುಡುಗಿಯಲ್ಲ. ಯಾವುದೋ ಸಂದೇಹ ತೋರಿತು—ನೀನು ರುಸ್ತುಮನಲ್ಲವೇ ಎಂದು ಕೇಳಿದೆ. ಆದರೂ ನೀನು ಹೇಳಿದ ಒಂದು ಮಾತು ಮಾತ್ರ ನಿಜ; ರುಸ್ತುಮರೇ ಇಲ್ಲಿದ್ದಿದ್ದರೆ ಈ ಕಾಳೆಗವಾಗುತ್ತಿರಲಿಲ್ಲ. ಅವರು ಬಲು ದೂರದಲ್ಲಿದ್ದಾರೆ. ಇಲ್ಲಿಗೆ ಹೇಗೆ ಬರಬೇಕು?....ನೀನು ಹೆದರಿಸುವುದಕ್ಕೆ ಬರುವೆ ಯಾದರೆ, ನಿಲ್ಲು ಸೆಣಸು. ಎಲವೊ, ಆಳು ಆನೆಯಂತಿದ್ದ ಮಾತ್ರಕ್ಕೇ ಹೆಚ್ಚಿಗೆ ಬರುವುದೇನು? ಹೆಚ್ಚು ಯುದ್ಧಗಳಲ್ಲಿ ನಿಂತು ನಿನ್ನ ಪರಾಕ್ರಮವನ್ನು ತೋರಿಸಿರಬಹುದು. ನಿನ್ನ ಶತ್ರುಗಳು ಆಗ ಸೋತು ಹಲ್ಲುಕಿರಿದಿದ್ದರೆ ಆಗ ಸೊಹ್ರಾಬನಂಥ ವೀರನಾವನೂ ಹುಟ್ಟಿರಲಿಲ್ಲ ಕಂಡೆಯಾ. ಈಗ ಹುಟ್ಟಿ ಕಾಳೆಗಕ್ಕೆ ನಿಂತಿದ್ದಾನೆ. ವಯಸ್ಸಾದವನೆನ್ನುವೆ! ಯುದ್ಧದಲ್ಲಿ ಅದೃಷ್ಟ ಗಳು ಹೇಗೆ ನಡೆಯುವುವೂ ಯಾರು ಬಲ್ಲರು? ನಾವೆಲ್ಲರೂ ಸಾಗರದಲ್ಲಿ ಈಜುವವರಂತೆ, ಉಕ್ಕಲೆಗಳ ತುದಿಯಲ್ಲಿ ತೂಗಿ ಬಿದ್ದಿದ್ದೇವೆ. ಅಲೆಗಳು ಬೀಸಿ ಹೇಗೆ ತಳ್ಳುವುವೋ—ಎತ್ತಿ ದಡಕ್ಕೇ ಎಸೆಯುವುವೊ, ಇಲ್ಲವಾದರೆ ಸೆಳೆದುಕೊಂಡು ಹೋಗಿ ಸಾಗರದ ತಳಕ್ಕೇ ತಳ್ಳುವುವೊ ಯಾರು ಬಲ್ಲರು? ಕಾರ್ಯದ ಪರಿಣಾಮದಲ್ಲಿ, ಆ ಸಮಯದಲ್ಲಿ ಮಾತ್ರ ತಿಳಿದೀತು. ಎಂಥ

ವೀರನಾಗಲಿ ವಿನಯ ಕಲಿವುದು ಮೇಲು. ಎಲ್ಲಿ, ನಿನ್ನ ಕೈಚಳಕವನ್ನು ನೋಡೋಣ, ಹೋರು ಬಾ. ನಿನ್ನ ಹೆಮ್ಮೆಯ ಧೋರಣೆಗೆ ಆಸ್ಥಿಭಾರವಿದೆಯೇನೊ ನೋಡೋಣ.

### ರುಸ್ತುಂ

ಭಲೆ ಭಲೆ, ಎಂಥ ವೀರಾಲಾಪ! ನಿನ್ನ ಧ್ವನಿಯನ್ನು ಕೇಳಿ ನಿನಗೇ ಸಂತೋಷವಾಗುತ್ತಿರುವಂತಿದೆ. ಅಮ್ಮನ ಮಡಿಲನ್ನು ಇನ್ನೂ ನಿನ್ನೆ ಮೊನ್ನೆ ಬಿಟ್ಟು ಬಂದದ್ದು....ಪ್ರಪಂಚಕ್ಕೆ ಕಣ್ಣು ತೆರೆಯುವುದರೊಳಗಾಗಿಯೆ ಯಮನ ಸದನಕ್ಕೆ ಹೋಗಬೇಕಾಗಿ ಬಂದಿತು, ಪಾಪ!....(ತುತೂರಿ)....ನೀನು ಹಿಂತಿರುಗಿ ಹೋಗಲಾರೆ ಖಂಡಿತ, ಈ ಭಲ್ಲೆಯೊಂದನ್ನು ತಡೆ, ನೋಡುವ!....

**(ಬೀಸಿ ಎಸೆಯುವನು. ಆ ಗುರಿಯಿಂದ ಹಾರಿ ಸೊಹ್ರಾಬನು ತಪ್ಪಿಸಿಕೊಳ್ಳುವನು, ಅದು ಮರಳು ಹಾರಿಸುವುದು. ರುಸ್ತುಮನು ಕೆಂಡ ಕೆಂಡವಾಗಿ ಗದೆಯನ್ನೆತ್ತಿ ಉರುಬಿನಿಂದ ಬಂದು,....)**

### ರುಸ್ತುಂ

ಎಲವೆಲವೊ, ಇದು ನಾಟ್ಯಶಾಲೆಯಲ್ಲ. ನೀನಿಲ್ಲಿ ನರ್ತಕನಲ್ಲ. ಗುಲಾಮ, ಈ ಕುಣಿತವನ್ನು ಹೆಣ್ಣುಗಳೆದುರಿಗೆ ತೋರಿಸು ಹೋಗು. ಕಾಳಗವು ಹುಡುಗಿಯಾಟವಲ್ಲ. ಈ ತೆರನಾದ ಯುದ್ಧ ವಿದ್ಯೆಯನ್ನು ನಿನಗೆ ಹೇಳಿಕೊಟ್ಟವರು ಯಾರು? ಕಾಲಿನ ಚಟುವಟಿಕೆಯು ತೋಳಿಗಿಲ್ಲವೆಂದು ತೋರುವುದು. ನಿನ್ನ ದೇವರನ್ನು ಸ್ಮರಿಸಿಕೊ. ಈ ಗದೆಯು ನಿನ್ನ ಮೈ ಎಲುಬುಗಳನ್ನು ನದಿಯ ದಂಡೆಯಲ್ಲಿ ಸೂರಿ ಚೆಲ್ಲುವುದು. ಅವು ಗಾಳಿಯಲ್ಲಿ ಬಿಳಿಯ ಬೇಕಾದೀತು. ಬರುವ ಬೇಸಗೆಯ ನೆರೆಯುವರೆಗೂ ಅವು ಅಲ್ಲಿಯೇ ಬಿದ್ದಿರಬೇಕಾದೀತು, ಜೋಕೆ....

**(ಗದೆಯನ್ನೆತ್ತಿ ತಿರುಗಿಸಿ ಸೊಹ್ರಾಬನ ತಲೆಗೆ ಗುರಿಯಿಟ್ಟು ಉರುಬಿನಿಂದ ಎರಡು ಕೈಗಳಿಂದಲೂ ಬೀಸುವನು. ಪಕ್ಕಕ್ಕೆ ಸರಿದು ಸೊಹ್ರಾಬನು ಸುಖವಾಗಿ ನಿಂತು, ತನ್ನ ಕೈ ಚಪಲವನ್ನು ಅಡಗಿಸುವನು....ಗುರಿತಪ್ಪಿದ ರಭಸದಲ್ಲಿ**

ರುಸ್ತುಮನು ಸ್ವಾಧೀನತಪ್ಪಿ ಮುಂದಕ್ಕೆ ಮುಗ್ಗರಿಸುವನು. ಆ ಸ್ಥಿತಿಯಲ್ಲಿ ರುಸ್ತುಮನನ್ನು ಹೊಡೆಯಲು ಮನಸ್ಸು ಬಾರದೆ, ಪುನಃ)

### ಸೊಹ್ರಾಬ್

ವೃದ್ಧವೀರನೆ, ಇನ್ನು ನಮ್ಮಿಬ್ಬರಿಗೂ ಯುದ್ಧವು ಸಾಕು, ನಿಮ್ಮನ್ನು ಕೊಲ್ಲಲು, ನಿಮ್ಮ ರಕ್ತವು ಹರಿಯುವುದನ್ನು ನೋಡಲು ಮನಸ್ಸೊಪ್ಪದು. ಹೀಗೇಕಾಗಿದೆಯೊ ಈ ಮಮತೆ ಯನ್ನು ಯಾವ ದೇವರುಗಳು ತಂದೊಡ್ಡಿರುವರೊ ಕಾಣೆ. ನೀವು ರುಸ್ತುಮರಾಗಿರದಿದ್ದರೆ ಬೇಡ. ಇಲ್ಲಿಗೆ ಕಾಳೆಗವನ್ನು ನಿಲ್ಲಿಸಿ ಸಂಧಿಮಾಡಿಕೊಳ್ಳೋಣ. ಒಂದು ಲೋಟಾ ಮದ್ಯದಿಂದ ಮೈತ್ರಿ ಬೆಸೆಯೋಣ. ನೀವು ರುಸ್ತುಮರ ಕಥೆಗಳನ್ನೂ ವಿಚಾರಗಳನ್ನೂ ನನಗೆ ಹೇಳಿ, ಕೇಳುತ್ತಿರುವೆನು. ಇಲ್ಲವಾದರೆ ನಮ್ಮ ನಮ್ಮ ಸ್ಥಾನಗಳಿಗೆ ನಾವು ಹಿಂತಿರುಗಿ ಹೋಗೋಣ. ಹುಡುಗನಾದರೂ ನಾನೂ ಯುದ್ಧಗಳನ್ನು ನೋಡಿದ್ದೇನೆ. ಸಾವಿರಾರು ಜನರನ್ನು ದಯೆಯಿಲ್ಲದೆ ಕೊಂದಿದ್ದೇನೆ. ಅವರ ರಕ್ತವು ಚಿಮ್ಮಿ ಹರಿದು, ಅವರ ನರಳಾಟವನ್ನು ಕೇಳಿ ಮನಕರಗದೆ ಕಾದಿದ್ದೇನೆ. ಆದರೂ ನಿಮ್ಮ ಪರಾಭವವನ್ನು ಸಹಿಸಲಾರೆ. ನೀವಷ್ಟು ಯುದ್ಧಮಾಡ ಬೇಕಾದರೆ ತುರಾನಿನಲ್ಲಿ ಬೇಕಾದಷ್ಟು ಜನ ವೀರರಿದ್ದಾರೆ. ನಾನು ಸೆಣಸಿ ಸೋಲಿಸಲು ಇರಾನೀ ಸೈನ್ಯದಲ್ಲಿ ಬೇಕಾದಷ್ಟು ಮಂದಿ ಯಿದ್ದಾರೆ. ನನಗೂ ನಿಮಗೂ ಮಾತ್ರ ಕಾಳೆಗ ಬೇಡ, ದೇವ ರಾಣೆ.

### ರುಸ್ತುಂ

(ಕೋಪದಿಂದ ತುಟಿಗಳು ನಡುಗುತ್ತ ಬಾಯಲ್ಲಿ ನೊರೆಬರುತ್ತಿರಲು ಭಯಂಕರನಾಗಿ)....ಎಲವೊ ಕುನ್ನಿ, ಬಾಯಿಗೆ ಬಂದಂತೆ ಹರಟ ಬೇಡ. ಬಾಲಕನೆಂದು ಕನಿಕರದಿಂದ ನಿನ್ನನ್ನು ಈವರೆಗೂ ಬಿಟ್ಟೆ. ಕನಿಕರವಿನ್ನು ಹೋಯಿತು. ಮರುಳು ಮಾತುಗಳಿಂದ, ನಿನ್ನ ಹೆಣ್ಣು ನರ್ತನದಿಂದ ಎರಡು ಸೈನ್ಯಗಳೆದುರಿಗೆ ನನಗೆ ಅಪಮಾನ ಮಾಡಿದ್ದೀಯೆ; ಬಾ, ಇದೇ ನಿನ್ನ ಕಡೆ.

(ಪ್ರಬಲವಾದಯುದ್ಧವಾಗುವುದು. ಒಬ್ಬರನ್ನು ಒಬ್ಬರು ಅಟ್ಟಿಸಿಕೊಂಡು ರಂಗದ ಸುತ್ತಲೂ ತಿರುಗಾಡುವರು.)

## ಗೋದರ್ಸ್

ಅದೊ, ರುಸ್ತುಮನ ಗುರಿ ಈಗಲೂ ತಪ್ಪಿತು.

## ಫೆರೂದ್

ಸೊಹ್ರಾಬನ ಕೌಶಲವೇ ಕೌಶಲ—ಆದರೂ ನೋಡು ಗೋದರ್ಸ್, ಆತ್ಮರಕ್ಷಣೆ ಮಾತ್ರ ಮಾಡಿಕೊಳ್ಳುತ್ತಿದಾನೆ.

## ಜೊವಾರಾ

ಕೈಗೆ ಸಿಕ್ಕಿಸಿಕೊಂಡು ಮೇಲೆ ಎತ್ತಿ ಎಸೆಯಬೇಕೆಂದು ಪ್ರಯತ್ನಮಾಡುತ್ತಿದಾನೆ, ನೋಡು. ರುಸ್ತುಮನಿಗೆ ಈ ಪಟ್ಟು ಎಂದಿಗೂ ತಪ್ಪಿದ್ದಿಲ್ಲ.

## ಗೋದರ್ಸ್

ಆ ಪಟ್ಟೂ ತಪ್ಪಿಹೋಯಿತು. ಭಾಪು, ಭಾಪು ಸೊಹ್ರಾಬ್.

## ಪೆರಾನ್‌ವೈಸಾ

ಹಮಾನ್, ಅದು ಪ್ರಬಲವಾದ ಪಟ್ಟು—ಹಾ—ಭೇಷ್— ತಪ್ಪಿಸಿಕೊಂಡ, ಸೊಹ್ರಾಬನ ಮೈಯಲ್ಲಿ ಹಿಡಿಗೆ ಆಯುವೆಲ್ಲಿ ಸಿಕ್ಕಬೇಕು?

## ಹಮಾನ್

ಸೊಹ್ರಾಬನಿಗೆ ಏಟು ಬಿದ್ದಿತು—ಇಲ್ಲ—ಅವನ ಗುರಾಣಿಯ ಚರ್ಮ ಹರಿದುಹೋಗಿ ಅದು ಮುಕ್ಕಾಯಿತು—ಔರಾ, ಔರಾ.

## ಪೆರಾನ್‌ವೈಸಾ

ಎಷ್ಟು ಬಲವಾದ ಏಟನ್ನು ಗುರಿಯಿಟ್ಟು ಹೊಡೆದಿದ್ದಾನೆ ಸೊಹ್ರಾಬ್!

## ಗೋದರ್ಸ್

ಆರ್‌ಮಸ್ದ್—ನಾರಿಮಾನ್—ರುಸ್ತುಮರ ತಲೆಗೆ ಏಟು ಬಿತ್ತು. ಅವರ ಕುಲಾವಿಯೂ ಕತ್ತರಿಸಿ ಬಿತ್ತು, ನೋಡು.

**ರುಸ್ತುಂ**

(ಕೊನೆಗೆ) **ರು.... ಸ್ತುಂ ಂ!**

(ಎಂದು ಸಿಂಹನಾದಮಾಡುತ್ತ ಸೊಹ್ರಾಬನ ಮೇಲೆ ಕವಿದು ಬರುವನು.)

**ಸೊಹ್ರಾಬ್**

ರು — ಸ್ತುಂ! ರು — ಸ್ತುಂ!!

(ಎನ್ನುತ್ತೆನ್ನುತ್ತ ಬಲಗೈ ಖಡ್ಗವನ್ನೂ ಎಡಗೈ ಗುರಾಣಿಯನ್ನೂ ಹಾಗೆಯೇ ಬೀಳುಬಿಟ್ಟು ಎದುರಿಗೆ ಬರುತ್ತಿರುವ ಭೀಷಣ ಮೂರ್ತಿಯನ್ನೇ ಎವೆಯಿಕ್ಕದೆ ದಿಟ್ಟಿಸಿ ನೋಡುತ್ತ ಆತನು ಪಕ್ಕದಲ್ಲಿ ತಿವಿಯಲು–ರುಸ್ತುಂ! ರುಸ್ತುಂ! ಆ–ಹಾ ಎಂದು ನೆಲಕ್ಕೆ ಉರುಳುವನು.

ಸೈನ್ಯದವರು ಆಶ್ಚರ್ಯಚಕಿತರಾಗಿ ಕಣ್ಣು ಬಾಯ್ಗಳನ್ನು ಬಿಟ್ಟು ಮೂಕರಂತೆ ನೋಡುತ್ತಿರುವರು.)

ತೆರೆ.

---

## ದೃಶ್ಯ ೯

**ತುರಾನಿ ಪಾಳೆಯದ ಹಿಂದುಗಡೆ. ಡೇರೆ ಕಾಯುವ ಕಾವಲಿನವನು–ಸುಲೇಮಾನ್ ತಾಹಮಿನೆಯವರ ಪ್ರವೇಶ.**

**ತಾಹಮಿನೆ**

ಸುಲೇಮಾನ್, ಈ ಪಹರೆಯವನನ್ನು ಕೇಳು.

**ಸುಲೇಮಾನ್**

ಇಲ್ಲಿಂದ ಕಾಳೆಗವಾಗುವ ರಂಗಕ್ಕೆ ಇನ್ನೂ ಎಷ್ಟು ದೂರ ಇದೆ?

**ಕಾವಲವನು**

ಕಾಲು ಘಂಟೆಯ ನಡಿಗೆ ಜನಾಬ್. ಆದರೆ ನೀವು ಈಗ ಈ ದಾರಿಯಲ್ಲಿ ಹೋಗುವ ಹಾಗಿಲ್ಲ. ಯುದ್ಧ ಮುಗಿದ ತುತೂರಿ ಕೇಳಿಸುತ್ತಿದೆ. ಸೈನ್ಯಗಳೆಲ್ಲ ಹಿಂತಿರುಗುತ್ತಿರಬೇಕು.

**ಸುಲೇಮಾನ್**

ಬೇರೆ ದಾರಿಯೇ ಇಲ್ಲವೆ? ಈ ದಿನ ವಿಶೇಷ ಸಮಾಚಾರವೇನು, ದ್ವಂದ್ವಯುದ್ಧವೆನ್ನುತ್ತಿದ್ದರಲ್ಲ.

**ಕಾವಲವನು**

ಹೌದು. ಆದರೆ ಸೈನ್ಯದವರು ಬರುವತನಕ ಆ ಸಮಾಚಾರ ತಿಳಿಯುವ ಹಾಗಿಲ್ಲ. ಭಯಂಕರ ಕಾಳೆಗವಾಗಿರಬೇಕು.

**ಸುಲೇಮಾನ್**

ಹಾಗೇಕೆ ಹೇಳುತ್ತೀಯೆ?

**ಕಾವಲವನು**

ಇಲ್ಲದಿದ್ದರೆ ಸೊಹ್ರಾಬ್‌ಜೀಯವರಿಗೆ ಮೂರು ಘಂಟೆಯ ಕಾಲ ಬೇಕಾಗುತ್ತಿರಲಿಲ್ಲ.

**ಸುಲೇಮಾನ್**

ಇರಾನ್ ಕಡೆಯ ವೀರನಾರು?

**ಕಾವಲವನು**

ತಿಳಿಯದು. ರುಸ್ತುಂಜೀಯವರನ್ನುಳಿದು ಬೇರೆ ಯಾರು ನಿಂತರೂ ಸೊಹ್ರಾಬ್‌ಜೀಯವರಿಗೆ ಕಡ್ಡಿಯ ಸಮಾನ.

**ತಾಹಮಿನೆ**

ಏನು ರುಸ್ತುಂಜೀಯವರೇ? ಅವರು ಮಗುವಿನ ಮೇಲೆ ಯುದ್ಧಕ್ಕೆ ನಿಂತಿದ್ದಾರೆಯೇ? ಅಯ್ಯೋ—

**ಕಾವಲವನು**

ನನಗೆ ತಿಳಿಯದು ಮಾಯಿ. ಅವರೆಲ್ಲಿ ಬಂದಾರು? ಒಂದು ವೇಳೆ ಬಂದಿದ್ದರೆ, ಎಂದು ನಾನು ಸುಮ್ಮನೆ ಯೋಚಿಸಿಕೊಂಡೆ.

**ತಾಹಮಿನೆ**

ಈತನ ಯೋಚನೆ ನಿಜವಾಗದಿರಲಿ ದೇವರೇ! ಬೇರೆ ಯಾವುದೂ ದಾರಿಯೇ ಇಲ್ಲವೆ, ಆ ಸ್ಥಳಕ್ಕೆ ಹೋಗುವುದಕ್ಕೆ?

**ಕಾವಲವನು**

ಈಚೆ ಕಡೆಯಿಂದ ಕಲ್ಲು ಮುಳ್ಳು ಹಾಯ್ದು ಬಳಸಿ ಹೋಗ ಬೇಕು. ನದಿಯ ದಂಡೆಯಲ್ಲೇ. ಇನ್ನು ನೀವು ಹೊರಡಿ. ಸೈನ್ಯದವರು ಬರುತ್ತಿದಾರೆ. ನಾನು ಹೀಗೆ ಜನದ ಕೈಯಲ್ಲಿ ಮಾತನಾಡುತ್ತಿರುವುದನ್ನು ಅವರು ಕಾಣಬಾರದು.

**ತಾಹಮಿನೆ**

ಏನಾಗಿದೆಯೊ ಕಾಣೆನಲ್ಲ ಸುಲೇಮಾನ್. ಬೇಗ ಬೇಗ ಹೆಜ್ಜೆಹಾಕು....ಸ್ವಲ್ಪ ತಾಳು, ಕಾಲಿಗೆ ಈ ಮುಳ್ಳುಗಳು ಅಡ್ಡ ಲಾಗಿವೆ. **(ಮುಳ್ಳುಗಳನ್ನು ಮುರಿದು ಕಿತ್ತು ಕಾಲಿನಲ್ಲಿ ರಕ್ತ ಸುರಿಯು ತ್ತಿರಲು, ಬಟ್ಟೆ ಹರಿದಿರಲು ಭರದಿಂದ)** ಉಂ, ನಡೆ.

**ಸುಲೇಮಾನ್**

ಸ್ವಲ್ಪ ತಾಳಿ, ಇಷ್ಟು ಹೊತ್ತೇ ಆಯಿತು. ಅತಿ ಆತುರದಿಂದ ಏನು ಪ್ರಯೋಜನ? ಇದಕ್ಕೂ ಮುಂಚೆ ನಾವು ಬರುವುದು ಸಾಧ್ಯವಾಗಲಿಲ್ಲ ತಾಯಿ. ವೃಥಾ ಆಯಾಸ ಹೆಚ್ಚುವುದು.

**ತಾಹಮಿನೆ**

ಒಂದು ಕ್ಷಣವೂ ತಡೆಯಲಾರೆ. ನಡೆ ನಡೆ. ನೀನೆಷ್ಟು ಜಾಗ್ರತೆ ಕರೆದುಕೊಂಡು ಹೋದರೆ ನಾನಷ್ಟು ಬೇಗನೆ ಬರುತ್ತೇನೆ. ದೇವರೇ, ದೇವರೇ, ನನ್ನ ಮಗುವನ್ನುಳಿಸು.

(ಹೋಗುವರು.)

ತೆರೆ.

---

# ದೃಶ್ಯ ೧೦

**ಪುನಃ ಯುದ್ಧರಂಗ, ಸರದಾರರು ಕೆಲವರು ಮಾತ್ರ ಎರಡು ಕಡೆಯವರೂ ಇರುವರು.**

**ನಡುವೆ ಸೊಹ್ರಾಬನು ನೆಲದಮೇಲೆ ಬಿದ್ದಿರುವನು. ರುಸ್ತುಮನು ಜಯೋನ್ಮತ್ತನಾಗಿ ಒಂದು ಭಲ್ಲೆಯ ಮೇಲೂರಿ ಕೊಂಡು ನಿಂತಿರುವನು.**

## ರುಸ್ತುಂ

ನಿನ್ನ ಔದ್ಧತ್ಯಕ್ಕೆ ತಕ್ಕ ಶಿಕ್ಷೆಯಾಯಿತು! ಈ ದಿನ ಇರಾನಿ ವೀರನೊಬ್ಬನನ್ನು ಜಯಿಸಿ ಅವನನ್ನು ಸುಲಿದು ಕೀರ್ತಿಯನ್ನು ಸೂರೆಗೊಂಡು ನಿನ್ನ ರಾಜನನ್ನು ಒಲಿಸಬೇಕೆಂದಿದ್ದೆ; ಅಥವಾ ರುಸ್ತುಮನೇ ಸ್ವಯಂ ಕಾಳೆಗಕ್ಕೆ ನಿಂತಿದ್ದರೆ ನಿನ್ನ ಯುಕ್ತಿಯಿಂದ ಅವನನ್ನು ಮರುಳುಮಾಡಿ, ಅವನನ್ನು ಸಂಧಿಗೊಡಂಬಡಿಸಿ ನಿನ್ನ ಹೆಚ್ಚಿಗೆಯನ್ನು ಎಲ್ಲ ಕಡೆಗೂ ಹರಡಿ ಅದು ನಿನ್ನ ತಾಯಿತಂದೆ ಗಳಿಗೆ ಕರ್ಣಾಮೃತವಾಗುವಂತೆ ಮಾಡಬೇಕೆಂದಿದ್ದೆ. ಮೂಢ, ಈಗ ಏನಾಯಿತು ನೋಡು: ಇಲ್ಲಿ ಸಾಯಲು ಬಿದ್ದಿರುವೆ. ಈ ಸ್ಥಿತಿಯಲ್ಲಿ ಯಾವ ರಾಜನಿಗೆ, ಯಾವ ತಾಯಿತಂದೆಗಳಿಗೆ ಪ್ರಿಯ ನಾದೀಯೆ? ನರಿ ನಾಯಿಗಳಿಗೆ ಹೆಚ್ಚು ಆದರನಾದೀಯೆ ಅಷ್ಟೇ. ರುಸ್ತುಮನನ್ನು ಕಾಳೆಗಕ್ಕೆ ಕರೆದ ವೀರನು ಅಜ್ಞಾತನೊಬ್ಬ ನಿಂದ ಪರಾಜಿತನಾಗಿ ಬಿದ್ದಿರುವೆ.

## ಸೊಹ್ರಾಬ್

**(ನೋವಿನಲ್ಲಿಯೇ ತಲೆಯೆತ್ತಿ)** ನೀನು ಹೆಸರಿಲ್ಲದವನು ನಿಜ. ಆದರೂ ನಿನ್ನ ಹೆಮ್ಮೆಯನ್ನು ಸಾಕುಮಾಡು. ನಿನ್ನ ಶಕ್ತಿಯು ನನ್ನನ್ನು ಮುರಿಯಲಿಲ್ಲವೋ! ನನ್ನನ್ನು ಕೊಂದವನು ನೀನಲ್ಲ. ನನ್ನ ತಂದೆ ರುಸ್ತುಮರು; ಅವರ ಹೆಸರು; ಅದರ ಜೊತೆಗೆ ಪ್ರೇಮದಿಂದ ತುಂಬಿದ ಈ ನನ್ನ ಹೃದಯ. ಈ ದಿನದವರೆಗೂ ಆಗಿದ್ದ ಸೊಹ್ರಾಬನೇ ಇಂದೂ ನಾನಾಗಿದ್ದಿದ್ದರೆ ನಿನ್ನಂಥ

ಹತ್ತು ಜನರು ನನ್ನ ಒಂದು ತೋಳಿಗೆ ಸರಿ ನಿಲ್ಲುತ್ತಿದ್ದಿರೇನೊ? ಆ ಹತ್ತು ಜನರೂ ನನ್ನಂತೆ ಹೀಗೆ ಕೆಳಗೆ ಬಿದ್ದಿರುತ್ತಿದ್ದರು. ನೀನು ಈಗ ನಿಂತಿರುವಂತೆ ಜಯದಲ್ಲಿ ನಾನು ನಿಂತಿರುತ್ತಿದ್ದೆ. ಅಲ್ಲ! ನಿನ್ನ ಗಂಡಗರ್ವವೆಷ್ಟು? ರುಸ್ತುಮರ ಹೆಸರನ್ನು ಕೇಳಿ ಕತ್ತಿ ಗುರಾಣಿಗಳನ್ನು ನಾನು ಕೆಳಗೆ ಬಿಟ್ಟಾಗ, ಹೇಡಿ, ಶಸ್ತ್ರ ರಹಿತನಾಗಿದ್ದ ನನ್ನನ್ನು,—ಹಿಂದೆರಡು ಬಾರಿ ನನಗೆ ಅನುಕೂಲ ದೊರೆತಿದ್ದಾಗ ಕನಿಕರದಿಂದ ನಿನ್ನ ಪ್ರಾಣ ಉಳಿಸಿದ ನನ್ನನ್ನು ಇರಿದಿರುವೆ. ಇದೆಂಥಾ ವೀರ! ಆದರೂ ಹೇಳುವೆನು ಕೇಳಿ ನಡುಗು. ಈ ಸಮಾಚಾರವು ರುಸ್ತುಂಜೀಯವರ ಕಿವಿಗೆ ಬೀಳದಿರದು. ತಮ್ಮ ಮಗನನ್ನು ಎಂಥ ಸನ್ನಿವೇಶದಲ್ಲಿ ಕೊಂದಿರುವೆಯೆಂದು ಅವರಿಗೆ ಬೇಗನೆ ತಿಳಿಯುವುದು. ಇದರ ಸೇಡು ತೀರಿಸಿಕೊಳ್ಳಲು ಅವರಿನ್ನೂ ಬದುಕಿದ್ದಾರೆ. ನಿನ್ನ ರಕ್ತಮಾಂಸಗಳನ್ನು ದಿಕ್ಕು ದಿಕ್ಕಿಗೂ ಎರಚಿ ಚೆಲ್ಲಿಯಾಡಲು ಅವರು ಬರುವಾಗ ನೀನೆಲ್ಲಿ ಹೋಗಿ ಅಡಗಿಕೊಳ್ಳಬಲ್ಲೆ? ಯಾರು ನಿನ್ನನ್ನು ಸಂರಕ್ಷಿಸಿಯಾರು? ಇಂಥ ಮಗನನ್ನು ಕಳೆದುಕೊಂಡೆನೆಂದು ತಿಳಿದ ಬಳಿಕ ಅವರಿಗಾಗುವ ದುಃಖವು ಎಂಥುದೆಂಬುದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಲ್ಲೆಯೇನೊ ನೀನು? ಅಯ್ಯೋ—ಆ ದುಃಖವನ್ನು ನೋಡುವವರೆಗಾದರೂ ನಾನು ಬದುಕಿರಬಲ್ಲೆನಾದರೆ.... ಅವರನ್ನು ಕೊನೆಗೂ ಕಾಣದೆಯೇ—

**ರುಸ್ತುಂ**

ಹುಚ್ಚು ಹರಟೆ. ಇವನಿಗೆ ಜ್ಞಾನಪಲ್ಲಟವಾಗಿದೆ. ತಂದೆಯಂತೆ—ಮಗನಂತೆ—ದುಃಖವಂತೆ—ಸೇಡಂತೆ.

**ಸೊಹ್ರಾಬ್**

(ಅದು ಕೇಳದವನಂತೆ)..ಆತನ ವಿಚಾರದಲ್ಲಿ ನನಗೆಷ್ಟು ವ್ಯಸನವಿಲ್ಲ. ಆಕೆ, ನನ್ನ ತಾಯಿ, ದೂರದಲ್ಲಿ ಅಡರ್‌ಬೈಜಾನಿನಲ್ಲಿ ನನಗಾಗಿ ಕಾದು ತಪಿಸುತ್ತಿರುವ ಆಕೆಗಾಗಿ ವ್ಯಸನ. ಈ ಸಮಾ

ಚಾರವು ಆಕೆಯ ಕಿವಿಗೂ ಬೀಳುವುದು. ಜಯಶೀಲನಾಗಿ ಕೀರ್ತಿಯನ್ನು ಹೊತ್ತು ತರುವನು, ಪತಿಯನ್ನು ಕರೆದುಕೊಂಡು ಬರುವನು, ಎಂದು ಕಾದಿರುವ ಆಕೆಗೆ, ಪಾಪ, ಸಿಡಿಲು ಬಡಿದಂತಾಗುವುದು. ಅಯ್ಯೋ ಆಕೆಯನ್ನು ಸಂತೈಸುವರಾರು? ಮಗನಿನ್ನು ತನ್ನೆಡೆಗೆ ಬಾರನು, ಅವನ ಮುಖವು ಇನ್ನಿಲ್ಲವಾಯಿತು, ಅಜ್ಞಾತನೊಬ್ಬನಿಂದ ಅವನು ಹತನಾದನು ಎಂದು ಕೇಳಿ ಆ ಹೆಂಗಸು ಹೇಗೆ ಸಹಿಸಿಯಾಳು?

## ರುಸ್ತುಂ

ಇದೇನು ಅಸಂಬದ್ಧ ಪ್ರಲಾಪ? ಅಡರ್‌ಬೈಜಾನ್—ತಾಯಿ—ರುಸ್ತುಮನ ಮಗನು—ಇವನು—ನನಗೆ ಒಂದೂ ಅರ್ಥವಾಗುತ್ತಿಲ್ಲ. ರುಸ್ತುಮರಿಗೆ ಮಗನೆಲ್ಲಿದ್ದಾನೊ? ನಿನಗಾರು ಹೇಳಿದವರು?

## ಸೊಹ್ರಾಬ್

ಇದ್ದ—ಇಂದಿನವರೆಗೂ. ನಾನೇ ಅವನು. ತಾಹಮಿನೆಯ ಮಗನು.

## ರುಸ್ತುಂ

ತಾಹಮಿನೆಯು ಹೆತ್ತವಳು ಮಗಳು. ಅವಳೂ ಮಗಳೂ ಅವರ ಊರಿನಲ್ಲೆಲ್ಲಿಯೊ ಕುಳಿತು ಸಂಸಾರದ ಕೆಲಸಗಳಲ್ಲಿರಬೇಕು. ನಿನಗೂ ಅವರಿಗೂ ಏನು ಸಂಬಂಧ? ನಿನಗಾರೊ ಮೋಸಮಾಡಿರಬೇಕು. ಅಥವಾ ನಿನ್ನ ಕೀರ್ತಿಯನ್ನು ಹೆಚ್ಚಿಸಲೆಂದು ನಿನ್ನ ತಂದೆ ರುಸ್ತುಮರೆಂದು ಸುಳ್ಳು ಹೇಳಿರಬೇಕು.

## ಸೊಹ್ರಾಬ್

(**ಒಂದು ಕೈಮೇಲೆ ಪಕ್ಕಕ್ಕೆದ್ದು**) ಏನೆಂದು ಹೇಳಿದೆ? ನನ್ನ ಮಾತನ್ನು ಸುಳ್ಳೆಂದು ಹೇಳುವವನು ನೀನಾರು! ನಿನಗೆಷ್ಟು ದಿಟ್ಟತನ! (**ಭಲ್ಲೆಯನ್ನು ಕೈತಡವಿ ಹುಡುಕಿ ಅದು ಸಿಕ್ಕದಿರಲು**) ಸಾಯು

ವವನ ಬಾಯಿಂದ ಸುಳ್ಳು ಹೊರಟೀತೇನೊ ? ನಾನು ಬದುಕಿದ್ದಷ್ಟು ದಿನವೂ ಸುಳ್ಳು ನನ್ನ ಹೆಸರಿದ್ದವರ ಬಳಿ ಕೂಡ ಬರಲಂಜುತ್ತಿತ್ತು.

### ರುಸ್ತುಂ

ತಾಹಮಿನೆಯೇ ಕಾಗದ ಬರೆದು ಕಳುಹಿಸಿದ್ದಾಳೆ.

### ಸೊಹ್ರಾಬ್

ಕಾಗದದಲ್ಲಿ ತಿಳಿಸಿದುದು ಸುಳ್ಳು ಸಮಾಚಾರ. ಪ್ರೀತಿಯ ಅಜ್ಞಾನದಲ್ಲಿ ಮಾಡಿದ ಯೋಚನೆ ಅದು. ಪತಿಯಂತೆ ನಾನೂ ಕೈತಪ್ಪಿ ಹೋಗುವೆನೆಂಬ ಭಯದಿಂದ ಹಾಗೆ ಮಾಡಿದಳು. ಇದರ ನಿಜವನ್ನು ರುಸ್ತುಮರಿಗೆ ತಿಳಿಸುವುದಕ್ಕಾಗಿಯೇ ಅವರನ್ನು ಹುಡುಕಿಕೊಂಡು ಈ ಮೂರು ತಿಂಗಳಿಂದಲೂ ನಾನು ದೇಶದೇಶವೂ ಅಲೆಯುತ್ತಿದ್ದುದು.....ಅಮ್ಮಾ..ಅಮ್ಮಾ....

### ರುಸ್ತುಂ

ಅದಕ್ಕಾಗಿ ಹುಡುಕಿಕೊಂಡು ತಿರುಗುತ್ತಿದ್ದುದು ! ಇದು ನಿಜವೇ ? ನನ್ನ ಕಿವಿಗಳು ಸರಿಯಾಗಿ ಕೇಳುತ್ತಿವೆಯೇ ! ಇದಕ್ಕೆ ನಿನ್ನ ಪ್ರಮಾಣವೇನು ? ಸಾಕ್ಷಿ ಯಾರು ?

### ಪೆರಾನ್‌ವೈಸಾ

ಈ ವಿಚಾರ ನನಗೂ ತಿಳಿದು ಬಂದಿತ್ತು ಸ್ವಾಮಿ. ಸರದಾರರ ಇಷ್ಟದಂತೆ ಅದನ್ನು ಯಾರಿಗೂ ತಿಳಿಸಲಿಲ್ಲ.

### ರುಸ್ತುಂ

ನಿಮಗೂ ತಿಳಿದಿತ್ತೇ ?....(**ಹುಚ್ಚನಂತಾಡುವನು.**)

### ಸೊಹ್ರಾಬ್

ಸೊಹ್ರಾಬನ ಮಾತಿಗಿಂತ ನಿನಗೆ ಪ್ರಮಾಣ ಬೇಕೆ ? ಈ ತೋಳುಬಂದಿಯನ್ನು ನೋಡು. ಪ್ರಯಾಣಕ್ಕೆ ಮುಂಚೆ ನನ್ನ

ತಾಯಿ ಕಟ್ಟಿದ ಈ ರಕ್ಷಾಬಂಧನವನ್ನು ನೋಡು; ಮೊಳಕೈ ಮೇಲೆ ಹುಯ್ದಿರುವ ಹಚ್ಚೆಯನ್ನು ನೋಡು. ಅವು ರುಸ್ತುಮ ರಿಗೆ ಸೇರಿದುವೊ ಅಲ್ಲವೊ ತಿಳಿಯುವುದು.

### ರುಸ್ತುಂ

**(ಕಳವಳಿಸಿ ಬಾಗಿ ತೋಳಕವಚವನ್ನು ಬಿಚ್ಚುತ್ತ)** ಅಂಥ ಪ್ರಮಾಣ ಗಳು ಸುಳ್ಳಾಗಲಾರವು. ಅವನ್ನು ನೀನು ತೋರಿಸಿದರೆ ನೀನು ಹೇಳುವುದು ನಿಜ. ನೀನು ರುಸ್ತುಮರ ಮಗನೇ ಖಂಡಿತ.

**(ಕೈ ನಡುಕ ಬಂದು ತೋಳಬಂದಿಯನ್ನು ಕೆಳಗೆ ಬೀಳುಬಿಟ್ಟು)** ಅಯ್ಯೋ ಮೋಸವಾಯಿತು—ಮೋಸವಾಯಿತು!

(ಹಿಂದತ್ತ ಬೀಸಿಕೊಂಡು ತತ್ತರಿಸಿ ಬರುವನು.)

### ಸೊಹ್ರಾಬ್

ಈಗೇನು ಹೇಳುವೆ? ನಾನು ರುಸ್ತುಮರ ಮಗನೊ ಅಲ್ಲವೊ? ಇವು ರುಸ್ತುಮರ ಗುರುತುಗಳೊ ಬೇರೊಬ್ಬರವೊ?

### ರುಸ್ತುಂ

(ಉನ್ಮತ್ತನಾಗಿ) ಅಯ್ಯೋ ಮೋಸವಾಡಿದರು—ಸರ್ವನಾಶ ವಾಯಿತು—ಮಗೂ ಮಗೂ, ಸೊಹ್ರಾಬ್, ನಾನೇ ನಿನ್ನ ತಂದೆ! ನಿನ್ನನ್ನು ಘಾತಿಸಿದ ಪಾಪಿ ತಂದೆ! **(ಎಂದು ಅವನ ಮುಖದಲ್ಲಿ ಮುಖ ಇಟ್ಟು ಅಳುವನು).**

### ಎಲ್ಲರೂ

ಇವರು ತಂದೆಮಕ್ಕಳೇ—ಏನನ್ಯಾಯವಾಯಿತು—ಏನ ನ್ಯಾಯವಾಯಿತು!

**(ಶೋಕದ ಭರದಲ್ಲಿ ಸ್ವಾಸ್ಥ್ಯ ತಪ್ಪಿ ರುಸ್ತುಮನು ಮೂರ್ಛೆ ಹೋಗುವನು. ಸೊಹ್ರಾಬನು ಅವನ ಹತ್ತಿರಕ್ಕೆ ಬರುಗಿಕೊಂಡು ಬಂದು ಪ್ರೀತಿಯಿಂದ ಆತನ ತಲೆಯನ್ನೂ ಮುಖವನ್ನೂ ಸವರುತ್ತಿ ರುವನು.)**

**ಸೊಹ್ರಾಬ್**

ನೀವೇ ರುಸ್ತುಮರೇ—ಹೌದು ಹೌದು—ಅಪ್ಪಾ, ಅಪ್ಪಾ, ಕಣ್ಣು ತೆರೆಯಿರಿ—ನನ್ನ ಕೂಡ ಮಾತನಾಡಿ....

(ಸ್ವಲ್ಪ ಹೊತ್ತಿನಲ್ಲಿ ಎಚ್ಚರಗೊಂಡ ರುಸ್ತುಮನು ಕೆಳಗಿನ ಮರಳನ್ನು ತಲೆಗೆ ಹುಯ್ಯುದ್ದುಕೊಳ್ಳುತ್ತ, ತನ್ನ ತಲೆಯ ಕೂದಲನ್ನು ಕಿತ್ತೊಳೆಯುತ್ತ, ಹುಚ್ಚು ಹುಚ್ಚಾಗಿ ತಿರುಗಾಡುತ್ತ....)

**ರುಸ್ತುಂ**

ಎಲವೊ ಗೋದರ್ಸ್, ಪೆರಾನ್‌ವೈಸಾ ಎಷ್ಟು ದಿನಗಳಿಂದ ಇದಕ್ಕೆ ಸಂಚುಮಾಡಿದ್ದಿರಿ? ನನ್ನೆದುರಿಂದ ತೊಲಗಿ ಹೋಗಿ! ಇಲ್ಲವಾದರೆ—(ಕತ್ತಿಯನ್ನು ಝುಳಪಿಸುತ್ತ ಅವರನ್ನಟ್ಟಿ ಹೋಗಿ) ಈ ಕತ್ತಿಯಿಂದ ಇಂದು ಪಾರಾಗಲಾರಿರಿ. (ಕಣ್ಣೀರಿಡುತ್ತ, ತಲೆಬಾಗಿಸಿ ಅವರು ಹೊರಟುಹೋಗುವರು). ಛೀ..ಏನು ಮಾಡುತ್ತಿದ್ದೇನೆ?

(ಹಿಂದಕ್ಕೆ ಬಂದು) ಮಗು, ನೀನೆಷ್ಟು ವಿನೀತನಾಗಿ ಬೇಡಿಕೊಂಡೆ! ನಾನು ಅಣಕಿಸಿದೆನೇ! ತಾಯಿಯ ಮನೆಯಿಂದ ಹೊರಟುದು ತಂದೆಯ ಭಲ್ಲೆಗೆ ತುತ್ತಾಗುವುದಕ್ಕಾಯಿತೇ? ಕಂದ, ನಿನ್ನನ್ನು ಸೋಲಿಸಲು ಶಕ್ತಿಯಿಲ್ಲದೆ ನೀನು ಆಯುಧವನ್ನು ಕೆಳಗೆ ಹಾಕಿದಾಗ ಹೇಡಿಯಂತೆ ನಿನ್ನನ್ನು ತಿವಿದು ಕೊಂದೆನೇ! ಹುಡುಗನಾದ ನಿನಗಿದ್ದ ಔದಾರ್ಯವು ರುಸ್ತುಮನಾದ ನನಗಿಲ್ಲದೆ ಹೋಯಿತೇ!....ಇದ್ದೊಬ್ಬ ಮಗನನ್ನು ಕೈಯಾರ ಕೊಂದ ಘಾತುಕನು ನೀನು ರುಸ್ತುಂ! ನೀನಿನ್ನು ಜೀವದಿಂದ ಇರಬಾರದು....—ಈ ಹಾಳು ಕೈಗಳು ಎಷ್ಟು ರಕ್ತದಲ್ಲಿ ತೊಯ್ದಿವೆ! ಈ ಖಡ್ಗದಿಂದ ಎಷ್ಟು ಜನ ತಂದೆಯರಿಗೆ ಪುತ್ರಶೋಕವುಂಟುಮಾಡಿದ್ದೇನೆ! ಎಷ್ಟು ಜನ ಸಾಧ್ವಿಯರಿಗೆ ವೈಧವ್ಯ ತಂದಿಸ್ದೇನೆ! ಛೀ ಪಾಪಿ, ಪಾಪಿ....(ಆತ್ಮಹತ್ಯಮಾಡಿಕೊಳ್ಳಲು ಯತ್ನಿಸುತ್ತಿರುವನು.)

**ಸೊಹ್ರಾಬ್**

ಕೂಡದು, ಕೂಡದು ಅಪ್ಪಾ; ಈ ರೀತಿ ಮಾಡುವುದು ನಿಮ್ಮಂಥ ವೀರರಿಗೆ ಉಚಿತವಲ್ಲ.

## ರುಸ್ತುಂ

ವೀರರು, ವೀರರು! ಘಾತುಕರು ವೀರರೆಂತಾದಾರು? ನನ್ನ ಕಾಲದಲ್ಲಿ ಎಷ್ಟು ಜನ ವೀರಾಳುಗಳನ್ನು ಕೊಂದು ನನ್ನ ಕೀರ್ತಿಯನ್ನು ಸ್ಥಾಪಿಸಿದೆ! ನಷ್ಟವು ನಮಗಾಗುವವರೆಗೂ ಯುದ್ಧದ ದುಃಖಗಳು ನಮಗೆ ಮನಗಾಣುವುದಿಲ್ಲ....ಅಯ್ಯೋ, ಅವರೆಲ್ಲರೂ ಇಂದು ಬದುಕುವಂತಾದರೆ, ತಮ್ಮ ತಮ್ಮ ತಂದೆ ತಾಯಿ, ಹೆಂಡಿರುಮಕ್ಕಳನ್ನು ಸೇರುವಂತಾದರೆ—ಅದಕ್ಕಾಗಿ ಬೇಕಾದರೆ ನನ್ನಾತ್ಮವನ್ನು ಮಾರಿ ಕೊಡುತ್ತೇನೆ,—ಮಗೂ ಮಗೂ, ಇನ್ನೀ ಕೈಯಿಂದ ಖಡ್ಗವನ್ನೆತ್ತುವುದಿಲ್ಲ.

## ಸೊಹ್ರಾಬ್

ನೀವಿನ್ನೂ ಮಹತ್ಕಾರ್ಯಗಳನ್ನು ಮಾಡಬೇಕಾಗಿದೆ. ನಿಮ್ಮಂಥವರು ಮಹತ್ಕಾರ್ಯ ಸಾಧನೆಗೇ ಹುಟ್ಟಿದ್ದೀರಿ. ತಂದೆಯ ಕೀರ್ತಿಯೇ ಮಗನದು, ಮಗನ ಕೀರ್ತಿ ತಂದೆಯದು. ಹೀಗೆ ಚಿಂತಿಸಿ ಫಲವಿಲ್ಲ.

## ರುಸ್ತುಂ

ಫಲವಿಲ್ಲ. ಫಲವೆಲ್ಲಿ ಬಂತು?

## ಸೊಹ್ರಾಬ

ಹೀಗೇ ಆಗಬೇಕೆಂದು ನಾನು ಹುಟ್ಟುವಾಗಲೆ ವಿಧಿಸಿಯುವುವಾಗಿತ್ತು. ಅದನ್ನು ದಾಟಬಲ್ಲವರಾರು? ತಂದೆಯೊಡನೆ ಮಾತ್ರ ಯುದ್ಧಕ್ಕೆ ನಿಲ್ಲಬೇಡೆಂದು ಎಚ್ಚರಿಸಿ, ಹೊರಡುವಾಗ ನನ್ನ ತಾಯಿ ಒತ್ತಿ ಒತ್ತಿ ಹೇಳಿದ್ದಳು. ನಿಮ್ಮ ಮೇಲೇ ಕಾಳೆಗಕ್ಕೆ ನಿಲ್ಲಬೇಕಾಯಿತು. ಕರುಳು ತಿಳಿದು ನೀವು ರುಸ್ತುಮರಲ್ಲವೇ ಎಂದು ನಾನು ಅಂಗಲಾಚಿ ಬೇಡಿಕೊಂಡಾಗ ನಿಮ್ಮ ಮನಸ್ಸಿಗೆ ವಿಪರೀತ ಕಲ್ಪನೆಗಳು ತೋರಿದುವು; ನೀವು ಆಗ್ರಹ ಮಾಡುವಂತಾಯಿತು. ನಾನು ಚೆನ್ನಾಗಿ ಬಲ್ಲೆ! ಮಮತೆಯು ನಿಮ್ಮ

ಲ್ಲಿಯೂ ಅಂಕುರಿಸಿತ್ತು; ಆ ಮಮತೆ ಪ್ರೀತಿಗಳನ್ನು ಮೆಟ್ಟಿ ತುಳಿಯಿತು ವಿಧಿ. ವಿಧಿಯು ಮುಟ್ಟಿದ ಬೆಣಚುಕಲ್ ಬೆಟ್ಟಗಳು ಜೇನುಮಯಣವಾಗುವುವು. ಬೆಣ್ಣೆಯು ಬೆಣಚುಕಲ್ಲಾಗುವುದು. ಯಾರೇನು ಮಾಡಿಯಾರು? ನನ್ನ ಕಾಲವಿಷ್ಟಕ್ಕೇ ಮುಗಿಯಿತು. ನೀವು ಸಹಿಸಬೇಕು. ಗಾಳಿಯಂತೆ ಬಂದೆ, ನೀರಿನಂತೆ ಹೋಗುತ್ತಿದೇನೆ.

### ರುಸ್ತುಂ

(ಹತ್ತಿರಕ್ಕೆ ಮಗನನ್ನು ಸೆಳೆದುಕೊಂಡು ನೋಡುತ್ತ) ಈ ವಯಸ್ಸಿಗೆ ನಿನಗಿಷ್ಟು ಸಹನೆಯನ್ನಾರು ಕಲಿಸಿದರು ಮಗು! ನಿನ್ನನ್ನು ಮಗನೆಂದು ಕರೆಯುವುದಕ್ಕೂ ನನಗಧಿಕಾರವಿಲ್ಲ. ನಿನಗೂ ನಿಮ್ಮ ತಾಯಿಗೂ ದೊಡ್ಡ ಅನ್ಯಾಯ ಮಾಡಿದೆ; ದುಷ್ಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು. ಅಯ್ಯೋ, ಸೊ-ಹ್ರಾ-ಬ್! ಸೊ-ಹ್ರಾ-ಬ್!!

### ಸೊಹ್ರಾಬ್

ವೃಥಾ ದುಃಖಿಸಬೇಡಿ. ನಿಮ್ಮನ್ನು ನೋಡಬೇಕೆಂಬುದು ನನ್ನ ಜೀವದ ಮುಖ್ಯ ಆಶೆಯಾಗಿತ್ತು. ಆ ಆಶೆ ನೆರವೇರಿತು. ಇನ್ನು ನಾನು ನಿಮ್ಮ ಮಗನೆಂದು ನೀವರಿತುದು ನನಗೆ ತಿಳಿಯುವಂತೆ ಒಂದು ಸಲ ಮುದ್ದಿಸಿ ನಿಮ್ಮ ಕಣ್ಣೀರನ್ನು ಮೇಲೆ ಹರಿಯಿಸಿ. ನನಗೆ ಬೇರಾವ ಅಪೇಕ್ಷೆಯೂ ಇಲ್ಲ. ತೃಪ್ತಿಯಾಗುವುದು.

(ರುಸ್ತುಮನ ದುಃಖವು ಕೋಡಿಹರಿವುದು. ಮುದ್ದಿಸುವನು. ರುಸ್ತುಮನ ಕುದುರೆಯು ಇಬ್ಬರ ನಡುವೆ ತಲೆಯಿಕ್ಕಿ ಬಂದು ಸೊಹ್ರಾಬನ ತಲೆಯನ್ನು ಮೂಸಿ ನೋಡಿ ರುಸ್ತುಮನ ಮುಖಕ್ಕೆ ಮುಖವಿಡುವುದು.)

### ರುಸ್ತುಂ

(ಅದನ್ನು ತಳ್ಳುತ್ತ) ಹೋಗಾಚೆಗೆ ರಾಕುಷ್, ಈ ಘೋರವನ್ನು ನೋಡುವುದಕ್ಕೆ ಈಗ ಬರುವೆ. ಈ ರಂಗಕ್ಕೆ ನನ್ನನ್ನೇಕೆ

ಹೊತ್ತು ತಂದೆ? ದಾರಿಯಲ್ಲಿಯೇ ನಿನ್ನ ಕಾಲುಗಳೇಕೆ ಕುಸಿದು ಬೀಳವಾಯ್ತು?

### ಸೊಹ್ರಾಬ್

ಅಪ್ಪಾ, ಇದೇಯೆ ರಾಕುಷ್? ಬಾ ರಾಕುಷ್. ಎಷ್ಟೋ ಬಾರಿ ನಿನ್ನ ಗುಣಗಳನ್ನೂ ಸಾಹಸಗಳನ್ನೂ ಕೇಳಿದ್ದೇನೆ. ನಿನ್ನ ಪುಣ್ಯವು ನನಗಿಲ್ಲದೆಹೋಯಿತು. (**ಅದರ ಆಯಾಲನ್ನು ಪ್ರೀತಿಯಿಂದ ಸವರುತ್ತ**) ನೀನು ಸರ್ವದಾ ತಂದೆಯವರ ಹತ್ತಿರವಿರುವೆ. ಅವರ ಸೇವೆಮಾಡಿರುವೆ. ಅವರ ಊರುಗಳಲ್ಲಿ ತಿರುಗಾಡಿ ಅಲ್ಲಿನ ನದಿ ಸರೋವರಗಳಲ್ಲಿ ದಾಹವಾರಿಸಿಕೊಂಡಿರುವೆ. ತಾತಂದಿರು ಸಾಲ್ ರವರ ಸ್ವಂತ ಕೈಯಿಂದ ಹುಲ್ಲು ತಿಂದಿರುವೆ. ನಾನೋ—ಅಪ್ಪಾ....

### ರುಸ್ತುಂ

ಮಗು—

### ಸೊಹ್ರಾಬ್

ರಾಕುಷಿನ ಮೇಲೆ ಇರಿಸಿಕೊಂಡು ನನ್ನ ದೇಹವನ್ನು ಸೆಯಿಸ್ತಾನಿಗೆ ತೆಗೆದುಕೊಂಡು ಹೋಗಬೇಕು. ನನ್ನನ್ನು ಇವರೊಡನೆ ಹಿಂದಕ್ಕೆ ಊರಿಗೆ ಕಳುಹಿಸಬೇಡಿ. ಅಮ್ಮನು.... ಈ ದುಃಖವನ್ನು ಸಹಿಸಲಾರಳು. ಮೂರು ತಿಂಗಳೊಳಗೆ ಅವರ ಬಳಿಗೆ ನಿಮ್ಮನ್ನು ಕರೆದುತರುವೆನೆಂದು ನಾನು ಅವರಿಗೆ ಭಾಷೆ ಕೊಟ್ಟಿದ್ದೆ..ಅಮ್ಮಾ..ಅಮ್ಮಾ..(**ನೋವಿನಲ್ಲಿ ಕಣ್ಣುಮುಚ್ಚುವನು.**)

**ಸುಲೇಮಾನ್ ಶಾಹಮಿನೆಯವರ ಪ್ರವೇಶ.**

### ಶಾಹಮಿನೆ

ಸುಲೇಮಾನ್, ಅವರೆಲ್ಲಿರುವರು ಬೇಗನೆ ತೋರಿಸು; ಸೊಹ್ರಾಬ್—ಸೊಹ್ರಾಬ್—ನನ್ನನ್ನು ವಂಚಿಸಿ ನೀನೆಲ್ಲಿ ಹೋದೆ—ಇನ್ನಾರನ್ನು ಸೊಹ್ರಾಬ್ ಎಂದು ಕರೆಯಲಿ, ಬೇಟಾ—

**ಸುಲೇಮಾನ್**

ಹೀಗೆ, ತಾಯಿ, ಹೀಗೆ ಬನ್ನಿ....

**ತಾಹಮಿನೆ**

(ಒಂದೇ ಹಾರಿಗೆ ಹೋಗಿ ಸೊಹ್ರಾಬನನ್ನು ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡು ಅಳುತ್ತ) ಸೊಹ್ರಾಬ್,....ದೇವರೆ, ನನ್ನ ಜೀವವನ್ನು ತೆಗೆದುಕೊಂಡು ನನ್ನ ಮಗುವನ್ನು ಉಳಿಸಿಕೊಡು. ಸೊಹ್ರಾಬ್....(ಅವನ ಕೆನ್ನೆಗೆ ತನ್ನ ಕೆನ್ನೆಯನ್ನುಜ್ಜುತ್ತ) ಅವರೊಡನೆ ಯುದ್ಧಮಾಡಬೇಡವೆಂದು ಬೇಡಿಕೊಂಡಿದ್ದೆ.... ಅಯ್ಯೋ, ಮಗೂ—ಮಗೂ. ನೆಲದ ಮೇಲೆ ಹೆಜ್ಜೆಯಿಟ್ಟರೆ ಸವೆಯುವೆ ಯೆಂದು ಪೋಷಿಸಿದ ಮೈ ರಣವಾಗಿದೆಯೇ! ನಿನ್ನಾಕೃತಿಯನ್ನೂ ಶಕ್ತಿಯನ್ನೂ ನೋಡಿ ಅವರಿಗೆ ನಿನ್ನ ಗುರುತಾಗದೆ ಹೋಯಿತೇ ಅವರಿಗೆ ಕರುಣೆ ಬರಲಿಲ್ಲವೇ? ಈ ರಕ್ತವನ್ನು ಹೇಗೆ ನೋಡಲಿ ಮಗೂ....ಅವರನ್ನು ಕರೆದುಕೊಂಡು ಬರುವೆಯೆಂದು ದಾರಿ ಕಾಯುತ್ತ ಎಷ್ಟೋ ಆಸೆಪಟ್ಟುಕೊಂಡು ಕುಳಿತಿದ್ದೆನೇ! ತಂದೆ ಯನ್ನು ಹುಡುಕಹೋದವನಿಗೆ ಗೋರಿಯು ಗತಿಯಾಯಿತೆ! ಇನ್ನು ನಾನು ಹೇಗೆ ಬದುಕಲಿ, ಮಗೂ; ನಿನ್ನನ್ನು ಹೊಯ್ಯುವ ಮುನ್ನ ನಿನ್ನ ತೋಳಿನ ಮೇಲಿನ ರಕ್ಷಾಬಂಧನವು ಅವರಿಗೆ ಕಾಣ ಬಾರದಾಗಿತ್ತೆ! ನಾನು ಬೇಡಿಕೊಂಡಂತೆ ನಿನ್ನ ಜೊತೆಯಲ್ಲಿಯೇ ನನ್ನನ್ನು ಕರೆದುಕೊಂಡೂ ಬಾರದೆ ಹೋದೆಯೇ! ಎಷ್ಟು ದೂರದಿಂದಲಾದರೂ ಅವರು ನನ್ನನ್ನು ಗುರುತಿಸುತ್ತಿದ್ದರು. ನಿನ್ನ ತಾಯನ್ನು ಅತಂತ್ರಳನ್ನಾಗಿ ಮಾಡಿ ಏಕೆ ಕಣ್ಣು ಮುಚ್ಚಿದೆ, ಕಂದ....

**ರುಸ್ತುಂ**

(ಮೇಲೆದ್ದು ನಿಂತು ತಡೆಯಲಾರದ ದುಃಖದಿಂದ ಇಬ್ಬರನ್ನೂ ನೋಡು ತ್ತಿದ್ದು) ಈ ಅಪರಾಧಕ್ಕಾಗಿ ಯಾವ ಶಿಕ್ಷೆಯನ್ನು ಬೇಕಾದರೂ

ಅನುಭವಿಸಲು ಸಿದ್ಧನಾಗಿದ್ದೇನೆ. ಅರಿಯದೆ ಆಯಿತು ವೈನಾ, ನೀನೂ ನಿಜವನ್ನು ಮರೆಮಾಚಿದೆ.

## ತಾಹಮಿನೆ

ನಿಮ್ಮದೇನು ತಪ್ಪು? ನನ್ನ ದುರದೃಷ್ಟ; ಹೇಗೆಯೋ ಯೋಚಿಸಿದುದು ಹೇಗೆಯೋ ಆಯಿತು.

## ರುಸ್ತುಂ

ನೀನು ಕಳುಹಿಸಿದ ಆ ಸಮಾಚಾರವು ಇಷ್ಟನರ್ಥಕ್ಕೆ ಕಾರಣ ವಾಯಿತು.

## ತಾಹಮಿನೆ

ಹೀಗೆಲ್ಲ ಆಗುವುದೆಂದು ಯಾರು ಎಣಿಸಿದ್ದರು? ಹೇಗಾದ ರೇನು ನನ್ನ ಬಾಳು ಬರಿದಾಯಿತು! ನನ್ನ ಕರುಳು ಕುಯಿದು ಬಿದ್ದಿತು....ಸೊಹ್ರಾಬ್, ಕಣ್ಣು ತೆರೆಯಮ್ಮ, ನಾನು ಮಗು—

## ಸೊಹ್ರಾಬ್

(ಆಕೆಯ ಪಕ್ಕಕ್ಕೆ ಅರ್ಧ ಕಣ್ಣು ತೆರೆದು) ಹಾ....ಎದೆ ಉರಿಯು ತ್ತಿದೆ....ಇದಾರು....ಅಮ್ಮನಲ್ಲವೇ....ಅಮ್ಮ....

## ತಾಹಮಿನೆ

ನಾನು ಕಂದ, ಗುರುತು ತಿಳಿಯಿತೆ, ಸೊಹ್ರಾಬ್?

## ಸೊಹ್ರಾಬ್

ಬಂದೆಯಾ ಅಮ್ಮ, ಕೊನೆಗೆ ನಿಮ್ಮನ್ನು ನೋಡದೆ ಸಾಯ ಬೇಕಾಯಿತೆ ಎಂದು ಸ್ವಲ್ಪ ವ್ಯಸನವಿತ್ತು. ದೇವರು ಕರೆತಂಡ ನಮ್ಮ, ನೀವು ಬಂದಿರಲ್ಲ.

## ತಾಹಮಿನೆ

ಬಂದೆ—ಮುಂದೆ ಎಂದೆಂದಿಗೂ ನಿನ್ನನ್ನು ಕಳೆದುಕೊಳ್ಳು ವುದಕ್ಕಾಗಿ ಬಂದೆ. ಯುದ್ಧ ಬೇಡವೆಂದು ಬೇಡಿಕೊಂಡಿದ್ದೆ ಮಗು—ನೀನು ಕೇಳಲಿಲ್ಲ.

**ಸೊಹ್ರಾಬ್**

ಈ ರೀತಿಯೇ ಆಗಬೇಕಾಗಿತ್ತಮ್ಮ. ನನ್ನ ಇಚ್ಛೆ ನಡೆಯಲಿಲ್ಲ. ಆದಾರು–ಸುಲೇಮಾನನೆ? ಹತ್ತಿರ ಬಾ ಸುಲೇಮಾನ್, ತಲೆಬಾಗಿಸಿ ಏಕೆ ನಿಂದೆ? ನನಗಿದು ಸಂತೋಷದ ದಿನ. ನನ್ನಿಂದ ನಿಮಗೆಲ್ಲ ತುಂಬ ತೊಂದರೆಯಾಯಿತು.

(ಸುಲೇಮಾನನು ಹಲ್ಲು ಕಚ್ಚಿ, ಅವನ ಕೈಗಳನ್ನು ತನ್ನ ಕೈಯಲ್ಲಿ ಮೃದುವಾಗಿ ಹಿಡಿದು ತನ್ನ ತಲೆಯ ಮೇಲಿರಿಸಿಕೊಂಡು ಕಣ್ಣೀರು ಸುರಿಸುತ್ತಿರುವನು.)

ಅಪ್ಪಾ, ಅಮ್ಮನನ್ನೂ ನಿಮ್ಮನ್ನೂ ಸೇರಿಸುವೆನೆಂದು ಅವರಿಗೆ ಮಾತುಕೊಟ್ಟಿದ್ದೆ—ದೇವರು ದೊಡ್ಡವನು—ಆ ಆಸೆಯನ್ನು ನಡೆಸಿಕೊಟ್ಟ.

**ರುಸ್ತುಂ**

ನಡೆಸಿಕೊಟ್ಟ—

**ಸೊಹ್ರಾಬ್**

ಅಮ್ಮ, ನನ್ನ ಮಾತಿನಂತೆ ನಾನು ನಡೆದುಕೊಂಡಿದ್ದೇನೆ. ನಾನು ಹೇಳಿರಲಿಲ್ಲವೆ—ನಿಮಗೆ ವ್ಯಾಕುಲ ಬೇಡೆಂದು?

**ತಾಹಮಿನೆ**

ನಡೆದುಕೊಂಡಿದ್ದೀಯೆ ಮಗು.

**ಸೊಹ್ರಾಬ್**

ನನ್ನ ಇಷ್ಟಗಳೆಲ್ಲವೂ ಈಗ ನೆರವೇರಿದಂತಾಯಿತು, ಅಲ್ಲವೆ ಸುಲೇಮಾನ್?

**ಸುಲೇಮಾನ್**

ಎಲ್ಲರಿಗೂ ಸಂತೋಷವಾಗುವಂತೆ ನೆರವೇರಿಸಿದ್ದೀರಿ.

**ಸೊಹ್ರಾಬ್**

ಇನ್ನೆಂದಿಗೂ ನೀವು ಅಮ್ಮನನ್ನು ಒಬ್ಬಳಾಗಿ ಬಿಟ್ಟಿರಕೂಡದು ಅಪ್ಪಾ. (ರುಸ್ತುಂ ತಾಹಮಿನೆಯುವರಿಗೆ ದುಃಖವು ಮೀರಿ ಬರುವುದು.)

ಅಪ್ಪಾ, ಸರದಾರರಿಗೆ ಹೇಳಿಕಳುಹಿಸಿ ಸಂಧಿಮಾಡಿ. ಯುದ್ಧವು ನನ್ನೊಂದಿಗೇ ನಿಲ್ಲಲಿ. ತುರಾನಿಯವರನ್ನು ನೀವು ಶಿಕ್ಷಿಸಬೇಡಿ. ಅವರದೇನೂ ತಪ್ಪಿಲ್ಲ. ನನಗೋಸ್ಕರವಾಗಿ ಅವರು ಈ ಯುದ್ಧವನ್ನು ಹೂಡಿದರು....

**ರುಸ್ತುಂ**

ಶಿಕ್ಷೆ–ಶಿಕ್ಷೆ–ನಾನೇ? ಇನ್ನು ಶಿಕ್ಷೆಯ ಯೋಚನೆಯೇ—ಆಗಲಿ ಮಗು.

**ಸೊಹ್ರಾಬ್**

ಪೆರಾನ್‌ವೈಸಾಜೀಯವರು ನನಗೆ ಬಹು ಉಪಕಾರಮಾಡಿದರು. ಅಫ್ರಾಸಾಯಿಬರು ಅಣ್ಣನಂತೆ ನೆರವಿತ್ತರು. ಅವರಿಗೆ ನನ್ನ ನಮಸ್ಕಾರ ತಿಳಿಸಿ (**ನೋವಿನಿಂದ**) ಅ-ಹ–ಅ-ಹ—

**ರುಸ್ತುಂ**

ಸುಲೇಮಾನ್, ಸರದಾರರನ್ನು ಕರೆದುಕೊಂಡು ಬಾ, ಹೋಗು.

(**ಫೆರೂದ್, ಪೆರಾನ್‌ವೈಸಾ ಇಬ್ಬರೂ ಬರುವರು.**)

(**ಅವರ ಕೈಗಳನ್ನು ಸೇರಿಸಿ,**) ಪೆರಾನ್‌ವೈಸಾಜೀ, ಈ ಯುದ್ಧವು ಇಲ್ಲಿಗೆ ನಿಲ್ಲಲಿ. ನೀವು ಸುರಕ್ಷಿತವಾಗಿ ನದಿಯನ್ನು ದಾಟಿ ಹೋಗಿ. ಇರಾನಿನವರಿಂದ ನಿಮ್ಮವರಿಗೆ ಯಾವ ತೊಂದರೆಯೂ ಉಂಟಾಗದು. ಇದು ನನ್ನ ಮಗುವಿನ ಇಚ್ಛೆ. ನೀವೂ ನಿಮ್ಮ ರಾಜರೂ ಅದಕ್ಕೆ ಬಹು ಉಪಕಾರಮಾಡಿದ್ದೀರಂತೆ. ನಾನು ಕೃತಜ್ಞನಾಗಿದ್ದೇನೆ. ಇದನ್ನು ದಯವಿಟ್ಟು ಅಫ್ರಾಸಾಯಿಬರಿಗೂ ತಿಳಿಸಿ.

(**ಕಣ್ಣೀರು ತುಂಬಿ ಅವರಿಬ್ಬರೂ ಸೊಹ್ರಾಬನಿಗೆ ಮುಜರೆ ಮಾಡುವರು.**)

ಫೆರೂದ್, ಈ ಘೋರವಿನ್ನು ಸಾಕು. ನೀವು ಸೈನ್ಯದೊಡನೆ ಊರಿಗೆ ಹೊರಡಿ. ಇಲ್ಲಿ ನಡೆದುದನ್ನೆಲ್ಲ ನಿಮ್ಮ ರಾಜನಿಗೆ ತಿಳಿಸು. ಇನ್ನುಮೇಲೆ ನನ್ನ ಪಾಡು ನನ್ನದು.

ಜಾಮ್‌ಷೇದ್, ಜಾಮ್‌ಷೇದ್! (ಬರುವನು.) ಡೇರೆಗಳನ್ನೆತ್ತಿ ಪ್ರಯಾಣಕ್ಕೆ ಸಿದ್ಧರಾಗಿ. (ಹೋಗುವನು.) (ಪುನಃ ಸೊಹ್ರಾಬನಿರುವಲ್ಲಿಗೆ ಬಂದು,) ನಿನ್ನ ಇಚ್ಛೆಯಂತೆ ಎಲ್ಲವನ್ನೂ ಮಾಡಿರುವೆನು ಮಗು.

ಸೊಹ್ರಾಬ್

ನನ್ನ ಕೆಲಸವಾಯಿತು. ನಾಲ್ಕು ದಿನವಿದ್ದು ನಿಮ್ಮಿಬ್ಬರ ಸೇವೆಮಾಡುವ ಭಾಗ್ಯವೊಂದು ಮಾತ್ರ ದೊರೆಯಲಿಲ್ಲ. ಆದರೆ ಮನುಷ್ಯನ ಆಸೆಗೆ ಮಿತಿಯೆಲ್ಲಿ?....ಈ ನೋವನ್ನು ತಾಳಲಾರೆ. ಭರ್ಜಿಯನ್ನು ಹೊರಕ್ಕೆ ತೆಗೆದುಬಿಡಿ. ಸುಖವಾಗಿ ಪ್ರಾಣ ಬಿಡುವೆನು.

ರುಸ್ತುಂ

ಖುದಾ, ಖುದಾ, ನನ್ನ ಕೈಯಲ್ಲಾಗದು.

ಸೊಹ್ರಾಬ್

ಅಪ್ಪಾ, ನನ್ನ ದೇಹವನ್ನು ಸೆಯಿಸ್ತಾನಕ್ಕೇ ತೆಗೆಸಿಕೊಂಡು ಹೋಗುವಿರಿತಾನೆ?

ರುಸ್ತುಂ

ತೆಗೆದುಕೊಂಡು ಹೋಗುವೆನು.

ಸೊಹ್ರಾಬ್

ಅದನ್ನು ನಾಲರಿಗೆ ತೋರಿಸಿ ನಾರಿಮಾನ್ ಸಾಮ್‌ರವರ ಗುಂಬಸುಗಳ ಹತ್ತಿರವೇ ನನಗೂ ಸಮಾಧಿಮಾಡಿಸಬೇಕು.

ರುಸ್ತುಂ

ಮಾಡಿಸುವೆನು.

ಸೊಹ್ರಾಬ್

ನನ್ನ ಗೋರಿಯು ತನೆಯು ಉಳಿದ ಎಲ್ಲಕ್ಕಿಂತಲೂ ಎತ್ತರವಾಗಿರಬೇಕು.

**ರುಸ್ತುಂ**

ಎಲ್ಲಕ್ಕಿಂತ ಎತ್ತರವಾಗಿ ಕಟ್ಟಿಸುವೆನು.

**ಸೊಹ್ರಾಬ್**

ಸುತ್ತು ಹತ್ತಾರು ಮೈಲಿಯ ದೂರಕ್ಕೆ ಅದು ಕಾಣಿಸುವಂತಿರಬೇಕು. ಅದನ್ನು ನೋಡಿದವರು, ಅದು ಸೊಹ್ರಾಬನ ಗೋರಿ; ತಂದೆ ರುಸ್ತುಮನು, ಪಾಪ, ಮಗನೆಂದರಿಯದೆ ಕಾಳೆಗದಲ್ಲಿ ಕೊಂದ ಸೊಹ್ರಾಬನದು ಎಂದು ಗುರುತಿಸುವಂತಿರಬೇಕು.

**ರುಸ್ತುಂ**

ಆಗಲಿ.

**ಸೊಹ್ರಾಬ್**

ಇನ್ನು ನನ್ನನ್ನು ಕಳುಹಿಸಿಕೊಡಿ ಅಪ್ಪ.

**ರುಸ್ತುಂ**

ಹೀಗೆ ಬಾ ಸುಲೇಮಾನ್.

**ಸೊಹ್ರಾಬ್**

ಕೂಡದು ಕೂಡದು, ನೀವೇ ತೆಗೆಯಬೇಕು. ನಿಮ್ಮ ಮಗನು ನೋವಿಗೆ ಅಂಜನು.

(ರುಸ್ತುಮನು ಬೇರೇ ಕಡೆಗೆ ಮುಖ ತಿರುಗಿಸಿ ಭರ್ಜಿಯನ್ನು ತೆಗೆಯುವನು; ರಕ್ತವು ಉಕ್ಕಿ ಹರಿಯುವುದು.)

**ರುಸ್ತುಂ-ತಾಹಮಿನೆ**

ಹಾ, ಹಾ—ಸೊಹ್ರಾಬ್—ಮಗೂ—ಮಗೂ!

**ಸೊಹ್ರಾಬ್**

(ಕ್ಷೀಣ ಸ್ವರದಿಂದ) ನೀವು ದುಃಖಿಸಬೇಡಿ. ಇದಕ್ಕಿಂತ ಮೇಲಾದ ಮರಣವು ಯಾರಿಗೆ ಬಂದೀತು? ವೀರನಂತೆ ಕಾದಿ ಸಾಯುತ್ತಿದ್ದೇನೆ. ನಿಮ್ಮ ಮಗನೆಂಬ ಬಿರುದಿಗೆ ತಕ್ಕಂತೆ ನಾನು ಕಾಳೆಗಮಾಡಿದೆನೇ, ಅಪ್ಪ?

### ರುಸ್ತುಂ

ಸೋತವನು ನಾನು. ಇನ್ನೊಬ್ಬನು ನಿನ್ನಂತೆ ಈವರೆಗೂ ನನ್ನೆದುರಿಗೆ ಯುದ್ಧಮಾಡಿಲ್ಲ. ಬೇರೊಬ್ಬರಿಂದ ನಾನಿಂಥ ಪೆಟ್ಟು ತಿಂದಿಲ್ಲ.

### ಸೊಹ್ರಾಬ್

ಈ ಮಾತು ನಿಜವೆ? ಧನ್ಯ—ಸೊಹ್ರಾಬ್, ಧನ್ಯ!

### ರುಸ್ತುಂ

ಸಾರಿಸಾರಿಗೂ ನಿಜ. ಎರಡು ಸೈನ್ಯಗಳು ಇದಕ್ಕೆ ಸಾಕ್ಷಿ ನನ್ನ ದುರಭಿಮಾನವೇ ಸಾಕ್ಷಿ.

### ಸೊಹ್ರಾಬ್

ನಿಮ್ಮನ್ನು ನೀವು ಹಳಿದಾಡಿಕೊಳ್ಳಬೇಡಿ. ಇದಕ್ಕಿಂತಲೂ ಹೆಚ್ಚಿನ ಕೀರ್ತಿ ಏನುಬೇಕು ಹೇಳಮ್ಮ—ಅಮ್ಮಾ—

### ತಾಹಮಿನೆ

ಆ....

### ಸೊಹ್ರಾಬ್

ನಾನು ಹುಟ್ಟಿದಂದಿನಿಂದ ನಿಮಗೆ ಕಷ್ಟವೇ ಆಯಿತು. ಇನ್ನು ಹೋಗಿ..ಬರುತ್ತೇನೆ....

### ತಾಹಮಿನೆ

ನನ್ನನ್ನು ಬಿಟ್ಟು ಹೋಗಬೇಡ—ಬೇಡ..(**ಇನ್ನೂ ಹತ್ತಿರ ಅಪ್ಪಿಕೊಂಡು ಮುದ್ದಾಡುವಳು.**)

### ಸೊಹ್ರಾಬ್

ಸೈರಿಸಿ—ಸೈರಿಸಿ..ಬಾಬುಜೀಯುವರಿದ್ದಾರೆ. ಅಲ್ಲಿ ನೋಡಿ, ಆಕ್ಸಸ್ ನದಿಯು ಹೇಗೆ ಹರಿಯುತ್ತಿದೆ! ಎಷ್ಟು ಶಾಂತವಾಗಿ—ಒಂದು ಅಲೆಯಿಲ್ಲದೆ!—ಇನ್ನೊಂದು ಮೈಲಿಯಲ್ಲಿ ಅದು ಸಾಗರವನ್ನು ಸೇರಿಕೊಳ್ಳುವುದು. ಪ್ರಯಾಣವನ್ನು ಮುಗಿಸುವೆನೆಂದು ನಿಶ್ಚಿಂತವಾಗಿದೆ—ಅಲ್ಲವೆ ಅಪ್ಪಾ—

**ರುಸ್ತುಂ**

ಹೌದು, ಮುಗಿಸುತ್ತಿದೆ.

**ಸೊಹ್ರಾಬ್**

ನಾನೂ ಅದರಂತೆಯೇ—ಮುಗಿಸುತ್ತಿದೇನೆ. (ಕಣ್ಣು ಮುಚ್ಚುವುದು.)

**ರುಸ್ತುಂ–ತಾಹಮಿನೆ**

ಮಗೂ—ನಾವೂ ಬರುವೆವು, ಕರೆದುಕೊಂಡು ಹೋಗು.

**ಸೊಹ್ರಾಬ್**

ಎಲ್ಲರಿಗೂ ಕಾಲವು ಬರುವುದು.

**ಇಬ್ಬರೂ**

ಈಗಲೇ ಬರುವಂತಾಗಲಿ, ಮಗು. ಈಗಲೇ ಬರುವಂತೆ ಹರಸು.

(ಬಿಕ್ಕಿ ಬಿಕ್ಕಿ ಅಳುವರು. ಮುಖದಲ್ಲಿ ಶಾಂತಿಯೂ ಸಂತೋಷವೂ ನಿಂತು ಸೊಹ್ರಾಬನು ನಿರ್ಯಾಣಹೊಂದುವನು. ಸ್ವಲ್ಪ ಹೊತ್ತು ನಿಶ್ಶಬ್ದ.. ಆಮೇಲೆ,—)

**ರುಸ್ತುಂ**

ಮೈನಾ?—

**ತಾಹಮಿನೆ**

ಜೀ—

**ರುಸ್ತುಂ**

ಹದಿನೈದು ವರ್ಷಗಳ ನಾಟಕವು ಮುಗಿಯಿತು. ನಮ್ಮ ಪ್ರೀತಿಯ ಫಲವನ್ನುಂಡೆವು.

**ತಾಹಮಿನೆ**

ನನ್ನ ಪ್ರೀತಿಯ ಫಲ.

**ರುಸ್ತುಂ**

ನನ್ನ ದುರಭಿಮಾನದ ಫಲ. ಇಬ್ಬರ ಅಜ್ಞಾನದ ಫಲ. ಅದೂ ಅಲ್ಲ ವೈನಾ. ಹದಿನೈದು ವರ್ಷಗಳ ಅನ್ಯಾಯಕ್ಕೆ ಶಿಕ್ಷೆ—

**ತಾಹಮಿನೆ**

ತಪ್ಪು ನನ್ನದು.

**ರುಸ್ತುಂ**

ಈ ಮಗುವಿರುವಷ್ಟು ಕಾಲವೂ ಒಂದು ದಿನ ಜೊತೆಯಲ್ಲಿದ್ದು ಅದನ್ನು ಪ್ರೀತಿಸಲಿಲ್ಲ.

**ತಾಹಮಿನೆ**

ಇಲ್ಲ.

**ರುಸ್ತುಂ**

ಈಗ ಅದು ತೀರಿಹೋಯಿತು. ಈಗ ಬೆರೆದಿರುವೆವು.

**ತಾಹಮಿನೆ**

ಹುಂ··ಅದು ಹುಟ್ಟುವ ಮುಂಚೆ; ಅದು ತೀರಿಹೋದ ಮೇಲೆ—ಅದನ್ನು ತೀರಿಸಿದ ಮೇಲೆ—ಇಲ್ಲಿ—ಹೀಗೆ.

(ಎರಡು ಕಡೆಗಳಲ್ಲಿ ಇಬ್ಬರೂ ನಿಂತು ಸೊಹ್ರಾಬನನ್ನು ದುಃಖದಿಂದ ನೋಡುತ್ತಿರುವರು.)

ತೆರೆ.



3929–29. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.